# ಭೂಮಿಗೆ ಬಂದ ಅನ್ಯಗ್ರಹಜೀವಿಗಳು: ಒಂದು ಅಧ್ಯಯನ:





***ನಾಗೇಶ್ ಕುಮಾರ್ ಸಿಎಸ್**

# ಪರಿವಿಡಿ:

# 1. ಸಂಕ್ಷಿಪ್ತ ಪರಿಚಯ

**ವಿಶ್ವದಲ್ಲಿ ನಮ್ಮದೊಂದೇ ಮನೆಯೆ?**

- ಇಂತಾ ದೊಡ್ಡ ವಿಶ್ವದಲ್ಲಿ, ಅಗಾಧವಾದ ಗ್ರಹಿಕೆಗೂ ಎಟುಗದ ಬ್ರಹ್ಮಾಂಡದಲ್ಲಿ ನಾವು ಮಾತ್ರ ಇದ್ದೇವೆಯೆ?
- ಇನ್ನೆಲ್ಲಿಯೂ ಸೃಷ್ಟಿಯ ಪ್ರಕ್ರಿಯೆ ನಡೆಯಲೇ ಇಲ್ಲವೆ?... ಈ ರೀತಿಯ ವಿಸ್ಮಯ ಹುಟ್ಟಿಸುವ ವೈವಿಧಯಮಯ ಜೀವರಾಶಿಗಳಿಂದ ಕೂಡಿದ ಜಗತ್ತೊಂದು ಅಲ್ಲೆಲ್ಲೂ ಎಂದೆಂದೂ ರೂಪುಗೊಳ್ಳಲೇ ಇಲ್ಲವೆ?
- ಆಗಸದತ್ತ ಮೋಡವಿಲ್ಲದ ರಾತ್ರಿಯಂದು ನಾವು ದಿಟ್ಟಿಸಿದಾಗ ಕಣ್ಣಿಗೆ ಕಾಣುವ ಮಿನುಗುವ ಲೋಕಗಳೆಲ್ಲಾ ಏನು? ಮಿಲಿಯಗಟ್ಟಲೆ ಚುಕ್ಕಿಗಳಂತೆ ನಿರಂತರ ಚಮಕಿಸುವ ಇವೆಲ್ಲಾ ಹಾಗಾದರೆ ಉಸಿರಾಟವಿಲ್ಲದೇ ಖಾಲಿ ಖಾಲಿ ಸತ್ತ ತಾರೆ ಮತ್ತು ಗ್ರಹಗಳೆ?
- ಇದೆಂತಾ ಬ್ರಹ್ಮಾಂಡವನ್ನು ಸೃಷ್ಟಿಸಿದನಾತ? ಎಂತಾ ಅನೂಹ್ಯ ವ್ಯರ್ಥ ಪ್ರಯೋಗವಲ್ಲವೆ ಹಾಗಾದರೆ ಇದು?

ಹೀಗೆಲ್ಲಾ ನಮಗೆ ಒಂದಲ್ಲಾ ಒಂದು ಬಾರಿ ಅನಿಸಿರಲಿಕ್ಕೆ ಖಂಡಿತಾ ಸಾಧ್ಯ.

ಮೊದಲೊಮ್ಮೆ ಭೂಮಿಯೇ ಒಂದು ಚಪ್ಪಟೆಯಾದ ತಟ್ಟೆ. ಕ್ಷಿತಿಜದತ್ತ ದೂರ ನಡೆದರೆ ಅಂಚಿನಿಂದ ಕೆಳಗೆ ಬಿದ್ದುಹೋಗುತ್ತೀವೆಂದು ಮನುಷ್ಯ ನಂಬಿದ್ದ ಕಾಲವಿತ್ತು. ಭೂಮಿಯೇ ಎಲ್ಲಕ್ಕೂ ಕೇಂದ್ರವೆಂದೂ, ನಮ್ಮ ಸುತ್ತಲೂ ಸೂರ್ಯ ಚಂದ್ರರು ಸುತ್ತುತ್ತಾರೆಂದು ನಂಬಿದ್ದ ಕಾಲವೂ ಇತ್ತು. ಯಾರೂ ಅದನ್ನು ಶತಮಾನಗಳ ಕಾಲ ಪ್ರಶ್ನಿಸಲೂ ಇಲ್ಲ... ಅದಕ್ಕೆ ಯಾವ ನರಪಿಳ್ಳೆಯಾದರೂ ವ್ಯತಿರಿಕ್ತವಾಗಿ ಪಿಸುಗುಟ್ಟಿದರೂ ಅವರಿಗೆ ಅಪಹಾಸ್ಯ, ಸಾಮಾಜಿಕ ನಿಂದನೆ, ಬಹಿಷ್ಕಾರ...ಅಷ್ಟೇ ಏಕೆ, ದೈಹಿಕ ಶಿಕ್ಷೆ ಕೊಡುವುದಕ್ಕೂ ಬಹುಸಂಖ್ಯಾತರು ಹೇಸುತ್ತಿರಲಿಲ್ಲ...

ಕಾಲಕ್ರಮೇಣ ವಿಜ್ಞಾನ ವಿಕಸಿತವಾಗುತ್ತಾ ಹೋಯಿತು...ಓಹೋ, ಭೂಮಿ ಗೋಲಾಕೃತಿಯಲ್ಲಿದೆ, ಆಹಾ, ನಾವೇ ಈ ಸೌರಮಂಡಲದ ಒಂದು ಗ್ರಹ, ಇಲ್ಲಿ ಚಂದ್ರ ನಮ್ಮ ಸುತ್ತ ಗಿರಕಿ ಹೊಡೆಯುತ್ತಾನೆ, ಅದರ ವಿರುದ್ಧವಾಗಲ್ಲ, ಎಂಟು ಚಿಕ್ಕ-ದೊಡ್ಡ ಗ್ರಹಗಳೆಲ್ಲಾ ನಮ್ಮ ನೆರೆಮನೆಗಳಲ್ಲಿವೆ...ಎಂದೆಲ್ಲಾ ಅರಿವಾಗತೊಡಗಿತ್ತು...

ವಿಜ್ಞಾನ ಪ್ರಪಂಚದಲ್ಲಿ ಪ್ರಪಂಚದ ಬಗ್ಗೆಯೇ ಒಂದು ಹೊಸ ಬೆಳಕು ಮೂಡಲಾರಂಭಿಸಿತ್ತು.

ಸೂರ್ಯನೇ ನಮ್ಮ ಮಂಡಲದ ಬಾಸ್ ಎಂದು ಮುಂದುವರೆದ, ಪ್ರಗತಿ ಹೊಂದಿದ್ದ ವಿಜ್ಞಾನ, ಬೆಳೆದ ಖಗೋಳಶಾಸ್ತ್ರ ನಮಗೆ ಮರುಪಾಠ ಮಾಡಿತು. ಅವನ ಸುತ್ತಲೂ ನಾವೆಲ್ಲಾ...!

...ಆಹಾ, ಇದೆಂತಾ ದಿಗ್ಭ್ರಮೆಗೊಳಿಸುವ ವೈಶಾಲ್ಯದ ಮಿಲ್ಕೀ ವೇ (ಕ್ಷೀರಪಥ)!...2 ಲಕ್ಷ ಜ್ಯೋತಿವರ್ಷದಷ್ಟು ಅಗಲವಿದೆಯಂತೆ ( ಒಂದು ಬೆಳಕಿನ ಕಿರಣ ಒಂದು ವರ್ಷದಲ್ಲಿ ಚಲಿಸುವ ದೂರ= 1 ಜ್ಯೋತಿವರ್ಷ=9500 ಶತಕೋಟಿ ಕಿಮೀ ಅಂದಾಜು)

...ಇದರಲ್ಲಿ 400 ಬಿಲಿಯನ್ (ಶತಕೋಟಿ) ತಾರೆಗಳಿದ್ದಾವಂತೆ...

## ಭೂಮಿಗೆ ಬಂದ ಅನ್ಯಗ್ರಹಜೀವಿಗಳು: ಒಂದು ಅಧ್ಯಯನ:

...ಇದರ ಒಂದು ನಗಣ್ಯ ಚಿಕ್ಕ ಭಾಗವೇ ನಮ್ಮ ಈ ಸೌರಮಂಡಲ...!.

ಅದರಾಚೆಯೂ ಊಹೆಗೂ ನಿಲುಕದಷ್ಟು ಅಗಾಧವಾದ ಬ್ರಹ್ಮಾಂಡ ಎಲ್ಲೆಲ್ಲೂ ವ್ಯಾಪಿಸಿದೆಯಂತೆ... ಲಕ್ಷಾಂತರ ಸೌರಮಂಡಲ, ತಾರಾ ಮಂಡಲಗಳಿದ್ದಾವೆ ಹಾಗಾದರೆ...ಎಣಿಸಲು ಹೋದರೆ ಸಂಖ್ಯಾಶಾಸ್ತ್ರವೇ ಸೋತುಹೋಗುತ್ತದೇನೋ, ಅಥವಾ ನಮ್ಮ ಅಳೆಯುವ ಶಕ್ತಿ!

2 ಟ್ರಿಲಿಯನ್ (2000 ಶತಕೋಟಿ) ಸೌರಮಂಡಲಗಳಿವೆಯಂತೆ ಈ ಕಾಣಬಲ್ಲ ವಿಶ್ವದಲ್ಲಿ (Observable Universe) ಎನ್ನುತ್ತದೆ  ಈಗಿನ ಖಗೋಳ ಶಾಸ್ತ್ರ...ಅದರ ಲೆಕ್ಕ ನಮಗೆ ಕೈಗೆಟುಕೀತೆ? ಇನ್ನು ನಮಗೆ ಕಾಣದ  ಅದರಾಚೆಯ ವಿಶ್ವದಲ್ಲಿ ಏನೇನುಂಟೋ , ಎಂತೋ?

ಹೀಗೆಲ್ಲಾ ಖಗೋಳ ಶಾಸ್ತ್ರ ತಜ್ಞರೇ ಬೆರಗಾಗುವಂತ ಹೊಸ ಮಾಹಿತಿಯನ್ನು ತಮ್ಮ ಪ್ರಬಲ ಟೆಲೆಸ್ಕೋಪ್ ಮತ್ತು ವೀಕ್ಷಣ ಸಾಧನಗಳಿಂದ ಹೋದ ಶತಮಾನದಲ್ಲಿ ಧಾರೆಯೆರೆಯತೊಡಗಿದರು...




ಇಂತಾ ಅಗಾಧ ಮಿಲ್ಕಿ ವೇ ಸಹಾ ಕಾಣಬಲ್ಲ ವಿಶ್ವದದಲ್ಲೆಲೋ ಒಂದು ಚಿಕ್ಕ ಭಾಗವಷ್ಟೇ!...ಇದರೊಳಗಿನ ಒಂದು ಗೆಲಾಕ್ಸಿಯಲ್ಲಿ ಯಾವುದೋ ಒಂದು ಅಣುವಿನಂತೆ ಇದೆ ಈ ನಮ್ಮ ಭೂಗ್ರಹ...

ಅದರಲ್ಲಿ ನಾವೆಲ್ಲಾ ಇದ್ದುಕೊಂಡು ಒಂದು ಪುಟಾಣಿ ಬಾಹ್ಯಾಕಾಶದ ತುಣುಕನ್ನು ದೂರದಿಂದ ನೋಡಿ, ಎಲ್ಲಿಯೂ ಬೇರೆ ಯಾರೂ ಇಲ್ಲ ಎಂದುಕೊಂಡಿದ್ದೇವಾ? ಎಂಬ ಅಚ್ಚರಿ ನಮಗೀಗ ಸ್ಪಷ್ಟವಾಗಿ ಮೂಡತೊಡಗಿದೆ.

### ಆಕಾಶದಲ್ಲಿ ಹಕ್ಕಿಗಳು ಮಾತ್ರವೇ ಹಾರುವುದಿಲ್ಲ!

ಆದಿಕಾಲದಿಂದಲೂ ಗತಿಸಿಹೋದ, ನಶಿಸಿಹೋದ ಪುರಾತನ ನಾಗರೀಕತೆಯ ದಾಖಲೆಗಳಲ್ಲಿಯೂ ಅವರ ಜಾನಪದದಲ್ಲಿಯೂ ಈ ಹಾರುವ ದೇವಮಾನವರು, ಅಪ್ಸರೆಯರು, ಯಕ್ಷರ ಅಸಂಖ್ಯ ಕತೆಗಳೂ, ಅವರು ಈ ನಾಗರೀಕರಿಗೆ ಮಾಡಿದ ಅವಿಸ್ಮರಣೀಯ ಸೇವೆ, ಹೊಸ ಪ್ರಯೋಗಶೀಲತೆ, ಅವರ ನಂಬಲಸಾಧ್ಯ ಅತಿಮಾನವ ಶಕ್ತಿಗಳ ಸವಿವರ ಸಚಿತ್ರ ಕತೆಗಳಿವೆ... ಅವರ ಗುಹೆಗಳ ಕೆತ್ತನೆ, ಚಿತ್ರಗಳಲ್ಲಿ, ಈ ಅಪರಿಚಿತ ಅತೀಂದ್ರಿಯ ಶಕ್ತಿಯ ಜೀವಿಗಳು ಕಟ್ಟಿಕೊಟ್ಟ ಬೃಹತ್ ದೇಗುಲಗಳಲ್ಲಿ, ಪಿರಮಿಡ್ಡುಗಳಲ್ಲಿ ಈ ದೇವತೆಗಳ ಗುಣಗಾನವಿದೆ...ಅವರ ಚಿತ್ರಗಳು ಈಗಿನ ಕಾಲದ ಬಾಹ್ಯಾಕಾಶ ಅಂತರಿಕ್ಷ ಯಾತ್ರಿಗಳನ್ನೂ ನಾಚಿಸುವ ರೀತಿಯಲ್ಲಿ ಮುಂದುವರೆದ ವಿಜ್ಞಾನದ ಕುರುಹುಗಳಂತೆ ಕಾಣುತ್ತವೆ. ಅವರ ಗಗನೌಕೆಗಳ ಚಿತ್ರಗಳು ನಮ್ಮ ವೈಮಾನಿಕ ವಿಜ್ಞಾನಿಗಳು ಮೂಗಿನ ಮೇಲೆ ಬೆರೆಳಿಟ್ಟುಕೊಳ್ಳುವಂತಿವೆ... ಇವರೆಲ್ಲಾ

## ಭೂಮಿಗೆ ಬಂದ ಅನ್ಯಗ್ರಹಜೀವಿಗಳು: ಒಂದು ಅಧ್ಯಯನ:

ಶಿಲಾಯುಗದ ಆದಿಮಾನವರಾಗಿದ್ದಾಗಲೇ ಈ ವಿಚಿತ್ರ ವಾಹನಗಳು ಹಾರುವ, ಚಿತ್ರವಿಚಿತ್ರ ಗಗನದಿರುಸು ಪೋಷಾಕುಗಳ ಕಲ್ಪನೆ ಬಂದಿದ್ದಾದರೂ ಹೇಗೆ?...ತಾವು ನೋಡದೇ ಇದ್ದುದನ್ನೆಲ್ಲಾ ಹೇಗೆ ಚಿತ್ರಿಸಿದರು ಮತ್ತು ಏಕೆ? ಇಂತಾ ಅಪೂರ್ವ ಘಟನಾವಳಿ ನಮ್ಮ ಜತೆ ನಡೆಯಿತೆಂಬ ದಾಖಲೆ ಚಿರವಾಗಿರಲಿ ಎಂದು ತಾನೆ?...

ಯಾರೋ ಇಂತವರು ಆಗಸದಿಂದ ಅಪರಿಚಿತರು ಬಂದಿಳಿದಿರಬೇಕು...ಹಲವು ವೈಜ್ಞಾನಿಕ ಪ್ರಗತಿಪರ ವಿಷಯಗಳನ್ನು, ಹೊಸ ಆವಿಷ್ಕಾರದ ಪದ್ಧತಿಗಳನ್ನೂ ಹುಟ್ಟುಹಾಕಿ, ಇವರ ಜತೆ ಸ್ವಲ್ಪ ಕಾಲವಿದ್ದು, ಪ್ರಾಯಶಃ ಸಂಬಂಧ ಬೆಳೆಸಿ, ಸಂತಾನವನ್ನೂ ಕೊಟ್ಟು ಹೊರಟುಹೋಗಿರಬೇಕು!... ಇಂತಾ ಅಗಾಧ ಪ್ರಗತಿಪರವಾದ ಪೀಳಿಗೆಯ ಜನರನ್ನು ಅವರು "ದೇವತೆ"ಗಳೇ ಎಂದು ನಂಬಿ ಕರೆದಿರಬೇಕು...ಮಾನವನ ಕಲ್ಪನೆಯಲ್ಲಿ ಭಗವಂತನ ಕಲ್ಪನೆಯೇ ಆಸೆ, ಬಯಕೆಗಳನ್ನು ಈಡೇರಿಸಿ ಉದ್ಧಾರ ಮಾಡುವವನು ಎಂದು ತಾನೆ?

ಹಾಗೆ ಬಂದವರು ಸೃಷ್ಟಿಕರ್ತ ಭಗವಂತನಲ್ಲವೆಂದರೂ 'ಉಪಕಾರಿ' ದೇವತೆಗಳೆನ್ನಲು ಅವರಿಗೆ ಏನಡ್ಡಿ?..'ಹಾರಬಲ್ಲ ಯಕ್ಷ, ಅಪ್ಸರೆ, ಕಿನ್ನರ- ಕಿಂಪುರುಷರನ್ನು ನಾವು ಕಂಡಿದ್ದೇವೆ, ಅವರ ಜತೆ ಇದ್ದೆವು' ಎಂದಾಗ ಏನು ತಪ್ಪು? ಹೇಗೆ ಸುಳ್ಳು?

ಎರಿಕ್ ವಾನ್ ಡ್ಯಾನಿಕೆನ್ ಎಂಬ ಆರ್ಕಿಯೋಲಜಿಸ್ಟ್ ( ಪುರಾತನ ಶಾಸ್ತ್ರಜ್ಞ) ತನ್ನ ಅತ್ಯಂತ ಜನಪ್ರಿಯ ಪುಸ್ತಕ "Chariots of The Gods" ಎಂಬಲ್ಲಿ ಇಂತಾ ಹಲವಾರು ಪುರಾತನ ಆಗಂತುಕ ದೇವತೆಗಳ ಪವಾಡವನ್ನು ವಿಸ್ತೃತವಾಗಿ ವಿವರಿಸಿದ್ದಾನೆ...

ರಾಮಾಯಣ ಕಾಲದಲ್ಲೇ ಭಾರತದಿಂದ ಲಂಕೆಗೆ ಆಗಸದಲ್ಲಿ ಹಾರಬಲ್ಲ ರಾವಣನ ಪುಷ್ಪಕ ವಿಮಾನದ ಕಲ್ಪನೆ ರಾಮಾಯಣವನ್ನು ರಚನೆ ಮಾಡಿದ ಕಾಡಿನಲ್ಲಿದ್ದ "ಏನೂ ಅರಿಯದ" ಋಷಿಗಳಿಗೆ ಬಂದಿದ್ದಾದರೂ ಹೇಗೆ?...ನಾವೇ ಹೇಳುತ್ತೇವಲ್ಲ, ಚರಿತ್ರೆ ಮರುಕಳಿಸುತ್ತದೆ ಎಂದು...ಈ "ಹಿಸ್ಟರಿ ರಿಪೀಟ್ಸ್" ಆಗಿರಬಾರದೇಕೆ?

ಇತಿಹಾಸವೆಂದರೆ ಇದೇ ತಾನೆ? ಆಗಾಗ ನಡೆದ ಸತ್ಯಸಂಗತಿಗಳ ವರದಿ! ಇದೆಲ್ಲಾ ಕಟ್ಟುಕತೆ, ಊಹಾಪೋಹ , ಭ್ರಮೆ ಹೇಗಾಗಲು ಸಾಧ್ಯ?...

ವಿಜ್ಞಾನಿಗಳು ನಿನ್ನೆ ಸುಳ್ಳೆಂದಿದ್ದನ್ನು ತಾವೇ ಇಂದು ನಿಜ, ಸಾಧ್ಯ ಎನ್ನುತ್ತಾರೆ... ಹಾಗಾದರೆ, ಭೂಮಿ ಚಪ್ಪಟೆ, ಮತ್ತು ಈ ಲೋಕದ ಕೇಂದ್ರ ಎಂದು ಪ್ರತಿಪಾದಿಸುತ್ತಿದ್ದ ಹಳೇಕಾಲದ ವಿಜ್ಞಾನಿ/ ಪಂಡಿತವರ್ಗವನ್ನೇಕೆ ಇನ್ನೂ ನಂಬಬಾರದು?

1930 ರಲ್ಲಿಲ್ಲದ ಟಿ.ವಿ ಈಗಿದೆ...1960ರಲ್ಲಿ ಇಲ್ಲದ ಮೊಬೈಲ್ ಈಗ ಸಾಧ್ಯ!...1980ರಲ್ಲಿಯೂ ಸಿನೆಮಾ-ಕತೆಯೆನಿಸುತ್ತಿದ್ದ ರಿಮೋಟ್ ಈಗ ಎಲ್ಲರ ಕೈಯಲ್ಲಿ ಕುಣಿಯುತ್ತಿದೆ... 200 ವರ್ಷದ ಕೆಳಗೆ ಫೋನ್ ಕೂಡಾ ಕಂಡಿರದ ನಾವು ಇಂದು ಅಂತರ್ಜಾಲ ಸಾಗರದಲ್ಲಿ ಈಜಾಡುತ್ತಿರುವುದು ಹೇಗೆ?. ನಾವೇ ಒಂದರ್ಥದಲ್ಲಿ ನಿನ್ನೆಯನ್ನು ಇಂದು ಸುಳ್ಳು ಮಾಡುತ್ತಿದ್ದೇವಲ್ಲವೆ?

ಹಾಗಾದರೆ ಈ ಅಗಾಧ ವಿಶ್ವದಲ್ಲಿ ಎಂತೆಂತಾ ಕಾಲಮಾನಗಳು, ಜೀವರಾಶಿಗಳು ಬಂದು ಹೋಗುತ್ತಿವೆಯೋ ಅದರ ಅಂದಾಜು ಹಾಕಲೂ ನಮಗೆ ಶಕ್ತಿಯಿಲ್ಲ...ಇನ್ನಾದರೂ ನಂಬಲಾಗದ್ದೆಲ್ಲಾ ಸುಳ್ಳು ಎಂಬ ಸಂಕುಚಿತ  ದೃಷ್ಟಿಕೋನವನ್ನು ಬಿಟ್ಟು ಹೊಸದನ್ನು ತೆರೆದ ಮನದಿಂದ ಸ್ವೀಕರಿಸಬೇಕಲ್ಲವೆ?

ಅದಕ್ಕಾಗಿಯೇ...

ಅಂತದೇ ಉಳ್ಳ ದಾಖಲೆ, ವರದಿಗಳನ್ನೇ ಆಧರಿಸಿ, ಸುಳ್ಳು ಹೇಳಲು, ತಪ್ಪು ಮಾಡಲು ಯಾವ ಕಾರಣವೂ ಅಥವಾ ಅವಕಾಶವೂ ಇಲ್ಲದ ನಮ್ಮಂತ ಸಾಮಾನ್ಯರೂ, ವಿಮಾನದ  ಸಿಬ್ಬಂದಿ ವರ್ಗದವರೂ, ನಿವೃತ್ತ  ಸೇನಾಧಿಕಾರಿಗಳೂ ಹಲವರು ಕಳೆದ 100 ವರ್ಷಗಳಲ್ಲಿ ಉಲ್ಲೇಖಿಸಿದ: ಸವಿವರವಾದ ಅನ್ಯಗ್ರಹಜೀವಿಗಳ ವಾಹನಗಳು, ಇಳಿದಾಟ, ಅವರೊಂದಿಗೆ ಇವರ ಒಡನಾಟ, ಸಂಪರ್ಕ, ಅವರು ಇವರಿಗೆ ಕೊಟ್ಟ ಮಾಹಿತಿ, ಮಾಡಿದ ಪ್ರಯೋಗಗಳು... ಇವೆಲ್ಲಾ ರೋಚಕ  ಘಟನೆ ಮತ್ತು ಮಾಹಿತಿಗಳ ವಿವರಗಳನ್ನು ಇಲ್ಲಿ ಪ್ರಸ್ತುತ ಪಡಿಸುವ ಯತ್ನ ಇಲ್ಲಿ ಸಾಗಿದೆ...

ಈ ಇ-ಪುಸ್ತಕ ಬರೆಯುವ ಮುಖ್ಯ ಉದ್ದೇಶವೆಂದರೆ: 'ಅವರು' ಬಂದಿದ್ದಾರೆ, ಬರುತ್ತಿದ್ದಾರೆ!! ಎಂಬುದಕ್ಕೆ ದಂಡಿಯಾಗಿ ಸಿಗುತ್ತಿರುವ ಸಾಕ್ಷ್ಯಾಧಾರಗಳು...

ನೂರಾರು ವರ್ಷಗಳಿಂದ ಭೂಮಿಗೆ, ಚಿತ್ರವಿಚಿತ್ರವೆನಿಸುವ ಬಗೆಯ ವೈಜ್ಞಾನಿಕವಾಗಿ ನಾವು ಊಹಿಸಲಸಾಧ್ಯ ತಂತ್ರಜ್ಞಾನ ಮಾತ್ರ ಅಲ್ಲದೇ ಆಧ್ಯಾತ್ಮಿಕ (spiritual) ಪ್ರಗತಿ, ಜೈವಿಕ ತಂತ್ರಜ್ಞಾನದಲ್ಲಿ (Genetic engineering) ನಮ್ಮ ಗ್ರಹಿಕೆಗೆ ನಿಲುಕದ ಸೃಷ್ಟಿಯ ಹೊಸ ಬೌಂಡರಿಗಳನ್ನು ಭೇಧಿಸಿರುವ ಬೆಳವಣಿಗೆಯ ರೇಖೆಯಲ್ಲಿ ಎಲ್ಲಿಯೋ ಮುಟ್ಟಿಬಿಟ್ಟಿರುವಂತಾ ಜೀವಿಗಳು ಬಂದು ಹೋಗಿರುವಂತಾ ಪ್ರತ್ಯಕ್ಷದರ್ಶನದ ನಿದರ್ಶನಗಳು ಜಗತ್ತಿನಾದ್ಯಂತ ದಾಖಲೆಯಾಗುತ್ತಲೇ ಇವೆ...

ಅವರ ಇರುವಿಕೆ ಮತ್ತು ಭೇಟಿಗಳು ಪ್ರಶ್ನಾರ್ಹವಾದ, ಸಂಶಯಾರ್ಹ ಸೀಮೆಯನ್ನು ದಾಟಿ ಬಹಳ ಮುಂದೆ ಹೋಗಿಬಿಟ್ಟಿದೆ ಯೆನ್ನುತ್ತಾರೆ ಇದರ ಸಂಶೋಧಕರು. ಇದಕ್ಕಿರುವ ಗಣನೀಯ ಸಾಕ್ಷಿ, ಪುರಾವೆಗಳನ್ನು ಗಮನಿಸಿದರೆ ಮುಂಚಿನಂತೆ ತಿರಸ್ಕರಿಸಿ, ಮುಖ ಸೊಟ್ಟರಿಸಿ ಒಮ್ಮೆ ವ್ಯಂಗ್ಯವಾಗಿ ನಕ್ಕು ಮುಂದೆ ಹೋಗುವ ಸಮಯ ಇದಲ್ಲವೆಂದು ಯುಎಫ್ ಓ ಲಾಜಿಸ್ಟ್ಸ್ (UFOlogists) ( ಅನ್ಯಗ್ರಹ `ಶಾಸ್ತ್ರಿ'ಗಳ ☺ ) ದಿಟ್ಟ ಒಕ್ಕೊರಳಿನ ಅಭಿಪ್ರಾಯ.

ಇದೊಂದು ಎಲ್ಲರೂ ಬಗೆದು ನೋಡದ, ಬಹಿರಂಗವಾಗದ ಬೃಹತ್ ವಿಚಾರಧಾರೆ... ಬರೇ ಯಾವುದೋ ವಿಚಿತ್ರ ಹಾರುವ ತಟ್ಟೆ ಬಂತೆ ಇಲ್ಲವೇ ಎಂಬ ಚಿಕ್ಕ ಕುತೂಹಲಕಾರಿ ಮಕ್ಕಳ ಸಾಹಿತ್ಯದಂತಾ ಚರ್ಚಾವಿಷಯವಾಗಿ ಈಗ ಉಳಿದಿಲ್ಲ...

ಇದರಲ್ಲಿ ಮಾನವ ಈಗ ಅರಿಯದ, ಅರಿಯಲಾಗದ ಅಗಾಧವಾದ ವೈಜ್ಞಾನಿಕ, ಆಧ್ಯಾತ್ಮಿಕ, ಜೈವಿಕ ಮಜಲುಗಳಿವೆ...

ಇದರ ಮೇಲೆ ಕವಿದಿರುವ ರಹಸ್ಯ ಪರದೆಯನ್ನು ನಿಧಾನವಾಗಿ ನಾಜೂಕಾಗಿ ಎಳೆದು ಪರೀಕ್ಷಿಸಬೇಕು. ಇಂತಾ ಬಹುಮುಖ್ಯ ಮಾಹಿತಿಯನ್ನು ಜನಮನದಿಂದ ಯಾರು, ಯಾಕೆ ಮತ್ತು ಎಲ್ಲಿ ಗುಪ್ತವಾಗಿಟ್ಟು ಏನು ಲಾಭ ಪಡೆಯುತ್ತಿದ್ದಾರೆಂಬುದೂ ಯಾವುದೇ ಥ್ರಿಲ್ಲರ್ ನ ರೋಚಕ ಓಟಕ್ಕಿಂತಾ ಕಡಿಮೆಯೇನಿಲ್ಲ...

ಹಾಗಾಗಿ ನಮ್ಮ ಇದುವರೆಗಿನ ವಿಶ್ವಾಸ ಪದ್ಧತಿ/ ಮಾನ್ಯತೆ (Belief system) ಏನೇ ಇದ್ದಿರಲಿ, ನಮ್ಮ ಧಾರ್ಮಿಕ, ರಾಜಕೀಯ ಪಂಥ, ನಿಲುವು ಯಾವುದೇ ಇದ್ದಿರಲಿ, ಹೊಸ ವಿಚಾರಧಾರೆಯನ್ನು ಅರಿಯಲು ತೆರೆದ ಮನಸ್ಸು ಮತ್ತು ಬುದ್ದಿಯಿಂದ ಸಜ್ಜಾಗೋಣ...

ಈ ಮುಂದಿನ ಅಧ್ಯಾಯಗಳನ್ನು ಓದಲು ಈ ಮಾನಸಿಕ ಸಿದ್ಧತೆ ಅಗತ್ಯ ಕೂಡಾ.

## 2. ಹಿನ್ನೆಲೆ: ಐತಿಹಾಸಿಕ, ಪೌರಾಣಿಕ ಘಟನೆಗಳು( ಪಾತಾಳ ಲೋಕಗಳು), ದೇವತೆ-ಅಪ್ಸರೆ ಸಿದ್ಧಾಂತಗಳು




**It's a Bird...It's a Plane...It's Superman ಎಂಬ ಈಗಿನ ಕಾಲದ ಒಂದು ಮಕ್ಕಳ ಕಾಮಿಕ್ಸ್ ಹಾಡಿದೆ... ಕೆಲವು ಪುರಾತನ ಚಿತ್ರಗಳು ಹಾಗೇಕಿವೆ?**

ಪುರಾತನವಾದ ಗತಕಾಲದ ಹಲವು ನಾಗರೀಕತೆಗಳಲ್ಲಿ ಕೆಲವು ಆಗಿನ ಕಾಲಕ್ಕೆ ಸಾಧಿಸಲು ಸಾಧ್ಯವಿಲ್ಲವೆಂಬಂತಾ ಕಟ್ಟಡ ವಿನ್ಯಾಸ, ಗಾತ್ರ, ಜೀವನಶೈಲಿ ಮತ್ತು ಇತರ ಪುರಾವೆಗಳು ಕಾಣಸಿಗುತ್ತವೆ. ಈಗಿನ ನಮ್ಮ ಬಳಿ ಲಭ್ಯವಿರುವ ಕಲ್ಪನಾಶಕ್ತಿ, ಬೌದ್ಧಿಕ ವಿಕಾಸ, ಅಂದಾಜು ಮಾಡಬಲ್ಲ ತಂತ್ರ, ವಿನ್ಯಾಸ ತಂತ್ರಜ್ಞಾನ, ಮೆಕ್ಯಾನಿಕಲ್ ಸಾಧನಗಳು ಎಲ್ಲವೂ ಬೆಚ್ಚಿ ಬೆರಗಾಗುವಂತಾ, ನಮ್ಮ ತರ್ಕ ಸೋತುಹೋಗುವಂತಾ ಪ್ರಗತಿಯ ಚಿನ್ಹೆಗಳಿರುವ ಆಗಿನ ಕಟ್ಟಡಗಳು! ... ಉತ್ಖನನವಾದ ಕಲ್ಲಿನ ಕೆತ್ತನೆ ಮತ್ತು ಚಿತ್ರಗಳಲ್ಲಿ ಅವರು ನಂಬಿದ್ದ 'ದೇವತೆ' ಗಳ ಕುರುಹುಗಳು ಎದ್ದು ಕಾಣುತ್ತವೆ.

ಮರಳುಗಾಡಿನಲ್ಲಿರುವ ಈಜಿಪ್ಟ್ ದೇಶದ ಬೃಹತ್ ಕಲ್ಲಿನ ಪಿರಮಿಡ್ಡುಗಳನ್ನು ಫಾರೋಹ್ಸ್ ಕಾಲದಲ್ಲಿ ಹೇಗೆ ಕಟ್ಟಿದರು ಮತ್ತು ಅದೇ ಶೈಲಿಯಲ್ಲಿ, ಅಷ್ಟೊಂದು ಸಂಖ್ಯೆಯಲ್ಲಿ ಏಕೆ ಕಟ್ಟಿದರು ಎಂಬುದಕ್ಕೆ ಸಮರ್ಪಕವೆನಿಸುವ ಉತ್ತರ ನಮಗಿನ್ನೂ ದೊರೆಯುತ್ತಿಲ್ಲ. ಅಲ್ಲಿ ದೊರಕದಂತಾ, ಲೋಕಲ್ ಅಲ್ಲದ ಕಲ್ಲಿನ ಚಪ್ಪಡಿಗಳು ತ್ರಿಕೋಣಾಕೃತಿಯಲ್ಲಿ ಸರಿಯಾಗಿ ಅಳತೆಮಾಡಿ ಪೂರ್ವ ವಿನ್ಯಾಸ ಮಾಡಿ, ಅತ್ಯಂತ ದಕ್ಷತೆಯಿಂದ ಮೇಲ್ವಿಚಾರಣೆ ಮಾಡಿದ ಈ ಎಂಜಿನಿಯರಿಂಗ್ ಮಾರ್ವೆಲ್ ಅಚ್ಚರಿಗಳು ಇಂದಿಗೂ ನಮಗೆ ಯಕ್ಷಪ್ರಶ್ನೆಯಾಗೇ ಇವೆ.

**<u>ಈಜಿಪ್ಟಿನ ಪಿರಮಿಡ್ಡುಗಳು:</u>**






ಇದೊಂದು ಬಹುಚರ್ಚಿತ ಜನಪ್ರಿಯ ರಹಸ್ಯ ವಿಚಾರ. ಇದರ ಬಗ್ಗೆ ದೊಡ್ಡ ದೊಡ್ಡ ಗ್ರಂಥಗಳು, ಸಿದ್ಧಾಂತಗಳೇ ಬಂದಿವೆ. ಆದರೆ ಯಾವೊಂದು ನಿಲುವೂ ಗಟ್ಟಿಯಾಗಿ ಹೀಗೇ ಪಿರಮಿಡ್‌ಗಳನ್ನು ಕರಾರುವಾಕ್ಕಾಗಿ ಕೆಲವು ನಿಗದಿತ ಅಕ್ಷಾಂಶ ರೇಖಾಂಶಗಳಲ್ಲಿ ಯಾಕೆ ಕಟ್ಟಿದರೆಂದು ಒಮ್ಮತದಿಂದ ಹೇಳುತ್ತಿಲ್ಲ. ಯಾರು ಇದರ ವಿನ್ಯಾಸವನ್ನು ಆಗಸದಿಂದ ನೋಡಿ ಇಂತದೇ ಸ್ಥಳದಲ್ಲಿ ಹೀಗೇ ವಿನ್ಯಾಸದಿಂದ ಕಟ್ಟಬೇಕೆಂದು ಹೇಳಿರಲು ಸಾಧ್ಯ? ಗಿಜಾದ ಗ್ರೇಟ್ ಪಿರಮಿಡ್ ಎಂಬುದಂತೂ ನಮ್ಮ ಭೂಪಟದ ಸರಿಯಾದ ಕೇಂದ್ರಬಿಂದುವಿನಂತೆ ಕಟ್ಟಿದ ಅತ್ಯದ್ಭುತ ಕಟ್ಟಡ ... ನೇರವಾಗಿ ಉತ್ತರ-ದಕ್ಷಿಣ ಧ್ರುವಗಳ ರೇಖೆಯಲ್ಲೂ , ಈಕ್ವೆಟಾರ್ ಸಮಾನ ಅಕ್ಷದಮೇಲೆಯೂ  ಕುಳಿತಿದೆ!

ಇಂತಾ ಒಂದು ತಂತ್ರಜ್ಞಾನ ಈಗಿನ ಕಾಲದಲ್ಲಿಯೂ ನಮ್ಮ ಸಕಲ ಧನಸಹಾಯ ಮತ್ತು ನೆರವು ಇದ್ದರೂ ನಾವು ಕಟ್ಟಲಾರೆವು ಎನ್ನುತ್ತಾರೆ...ಮರಳುಗಾಡಿಗೆ ಇಂತಾ ಸರಿಯಾದ ಸೈಜಿನ ದೊಡ್ಡ ಕಲ್ಲುಗಳನ್ನು ಹಡಗಿನಲ್ಲಿ ತಂದರೆ? ವಿಮಾನದಿಂದ ಹಾರಿಸಿ ತಂದರೆ?...ಅದು ಯಾರು? ಈಜಿಪ್ಟಿನ ಹಲವಾರು ಚಿತ್ರಗಳಲ್ಲಿ ಭೂಮಿಯವರಲ್ಲದಂತೆ ಕಾಣುವ ದೇವಮಾನವರ ಚಿತ್ರಣವಿದೆ. ದೊಡ್ಡ ತಲೆ, ಗುಳಿಬಿದ್ದ ಕಣ್ಣು, ತಲೆಗೆ ಶಿರಸ್ತ್ರಾಣ, ಕೊಂಬಿನಂತೆ ಬೆಳಕು ಚಿಮ್ಮಿಸುವ ಆಂಟೆನಾಗಳು..ಅವಕ್ಕೇನೂ ಅರ್ಥವಿಲ್ಲದೆ ಬರೆದ ಅವರು ಹುಚ್ಚರೆ?





ಆ ಪರೋಪಕಾರಿ ಜೀವಿಗಳು ಕಲಿಸಿಕೊಟ್ಟ ಆಗಿನ ಕಾಲಕ್ಕೆ ಭೂಮಿಯಲ್ಲಿ ಸಾಧ್ಯವಿಲ್ಲದ ಆಧುನಿಕ ಜೀವನ ವಿದ್ಯೆ, ಗಣಿತ ಶಾಸ್ತ್ರ, ಖಗೋಳ ತಂತ್ರ ಮತ್ತು ಅವರ ಹಿರೋಗ್ಲೆಫಿಕ್ಸ್ ಎಂಬ ಚಿತ್ರ-ಆಧರಿತ ಭಾಷಾ ಲಿಪಿ ಅವರ ಕೊಡುಗೆಯಲ್ಲವೆ?.

ಮೇಲಿನ ಚಿತ್ರದಲ್ಲಿ ಮಧ್ಯೆ ಈ ಹಾರುವ ತಟ್ಟೆ ಎಲ್ಲಿಂದ ಬಂತು, 5000 ವರ್ಷಗಳ ಕೆಳಗೆ?



**ಇವನ್ನು ವಿಮಾನಗಳು, ಗಗನನೌಕೆಗಳು ಅನ್ನದೇ ಇನ್ನೇನನ್ನೋಣ...? ಈಜಿಪ್ಟಿನ ಅಬೈಡೋಸ್ ನಲ್ಲಿನ ಸೆಟಿ ದೇವಸ್ಥಾನದ ಗೋಡೆ ಹಾಸುಗಲ್ಲು! (ಕ್ರಿ.ಪೂ 5000). ಹಿರೋಗ್ಲೆಫಿಕ್ಸ್ ತಿಳಿದವರು ಹೇಳುವಂತೆ: "ರಾಜ ರೆಮ್ಸಿಸ್ ಫಾರಿನ್ ಲ್ಯಾಂಡ್ಸ್ ಗಳಿಗೆ ನಮಿಸುವ ರಕ್ಷಕ" - ಇದರ ಅರ್ಥ...ಫಾರಿನ್ ಲ್ಯಾಂಡ್ಸ್ ಎಂಬುದರ ಲಿಪಿಯೇ ಈ ವಿಮಾನ ಮತ್ತು ಅಂತರಿಕ್ಷ ನೌಕೆಗಳು...ಅಂದರೆ??**

## ಈಗ ಮಂಗಳ ಗ್ರಹದಲ್ಲಿಯೂ ಸಿಕ್ಕಿದೆ !!:

ಈ ಈಜಿಪ್ಟಿನ ಹಿರೋಗ್ಲಿಫಿಕ್ಸ್ ಲಿಪಿ ಈಗ ಮಂಗಳಯಾನ ಮಾಡಿದ **ಮಾರ್ಸ್ ಕ್ಯೂರಿಯಾಸಿಟಿ ರೋವರ್** ನಲ್ಲಿ ಮಂಗಳ ಗ್ರಹದ ಕಲ್ಲುಗಳ ಮೇಲೆಯೂ ಹಾಗೆಯೇ ಬರೆದಿರುವ ಸಂದೇಶ ಕಾಣಿಸುತ್ತಿದೆ. ಇದು ಎಲ್ಲವನ್ನೂ ನಿರಾಕರಿಸುವ ಅಮೆರಿಕನ್ ಸರಕಾರಿ ಮೂಲದ **ನಾಸಾ** ತಾನೇ ಬಿಡುಗಡೆ ಮಾಡಿದ ವರ್ಣಚಿತ್ರ. ಅಲ್ಲಿ ಕೆಲವು ಪ್ರಾಣಿ/ ಮಾನವ ಎಲುಬುಗಳ, ಮಾನವಾಕಾರದ ದೇಹ/ ವಸ್ತು ಮುಂತಾದ ಪಳೆಯುಳಿಕೆಗಳೂ ಕಂಡುಬಂದಿವೆ. ಅಂದರೇನರ್ಥ?...ಅಲ್ಲಿದ್ದವರು ಈಗ ಕಾಣುತ್ತಿಲ್ಲವೆ?

ಇದು ಸತ್ಯವೇ ಆದರೆ ಈಜಿಪ್ಟಿನವರು ಅಷ್ಟೊಂದು ವಿವರಿಸುವ ದೇವತೆಗಳ ಕತೆಗಳು ಸತ್ಯಘಟನೆಗಳಾಗಿರಬಾರದೇಕೆ?

ಈ ಮಾರ್ಸ್ ನಲ್ಲಿ ( ಮಂಗಳಗ್ರಹದಲ್ಲಿ) ಆಗ ಜೀವಿಸುತ್ತಿದ್ದ ಪ್ರಗತಿಯಲ್ಲಿದ್ದ ಪೀಳಿಗೆಯೊಂದು ಭೂಮಿಗಿಳಿದು ಅವರಿಗೆ ಈ ಎಲ್ಲಾ ಸಹಾಯ, ಏರ್ಪಾಡು ಮಾಡಿಕೊಟ್ಟಿರಬಾರದೇಕೆ?



ಇದು ನಿಜವೇ ಆದರೆ ನಾವು ಈ ಸೌರಮಂಡಲವನ್ನು ನೋಡುವ ದೃಷ್ಟಿಕೋನ, ನಡತೆ, ವರ್ತನೆಯೇ ಸಂಪೂರ್ಣವಾಗಿ ಬದಲಾದೀತು ಅಲ್ಲವೆ? ನಾವು ಎಲ್ಲರಂತೆಯೇ ಒಂದು ಪೀಳಿಗೆ, ಹಾಗೂ ಅಭಿವೃದ್ಧಿಯಲ್ಲಿ ಹೋಲಿಸಿದಾಗ ಸ್ವಲ್ಪ ಹಿಂದೆಯೇ ಇದ್ದೇವೆ ಎನಿಸಬಹುದೇನೋ? ಅದಕ್ಕೇ ಜಾಹೀರು ಮಾಡಲಿಷ್ಟವಿಲ್ಲವೋ?

ಈಜಿಪ್ಟ್ ಮಾತ್ರವೇ ಅಲ್ಲ ಈ ಅನ್ಯಗ್ರಹ ದೇವತೆಗಳ ಆಗಮನದ ಫಲಾನುಭವಿ. ಭೂಮಿಯ ಬಹುತೇಕ ಪುರಾತನ ನಾಗರೀಕತೆಗಳಲ್ಲಿ ಈ ದೇವತೆಗಳಿಲ್ಲದ ಚರಿತ್ರೆ, ದಾಖಲೆಗಳೇ ಇಲ್ಲವೆನ್ನಿ.

**ಸ್ಟೋನ್ಹೆಂಜ್, ಇಂಗ್ಲೆಂಡ್:**

ಕ್ರಿ.ಪೂ 2500 ನಲ್ಲಿ ಕಟ್ಟಿದ ವೃತ್ತಾಕಾರದ ಕಲ್ಲುಜೋಡಣೆ ಕಟ್ಟಡ..ಅಲ್ಲಿಯೂ ಲೋಕಲ್ ಆಗಿ (250 ಕಿಮೀ ನಲ್ಲೂ) ದೊರೆಯದ ಕಲ್ಲುಗಳು... ಶಿಲಾಮಾನವ ಎಲ್ಲಿಂದ ತಂದ, ಯಾಕೆ?...ಯಾರು ಕಟ್ಟಿಸಿದರು ಈ ಡಿಸೈನಿನಲ್ಲಿ?, ಏತಕ್ಕಾಗಿ?.. ಇಂದಿಗೂ ಸರಿಯಾಗಿ ಹೇಳಲಾಗುತ್ತಿಲ್ಲ. ಇದೊಂದು ಸಮೂಹ ಸಮಾಧಿಯೆ? ಗಗನನೌಕೆಗಾಗಿ ಇಳಿಯಲು ಸೂಚಕವಾಗಿ ಕಟ್ಟಿದ್ದೇ? ಅನ್ಯಗ್ರಹ ಜೀವಿಗಳ ದೇವಸ್ಥಾನವಿತ್ತೆ? ಇದರ ವೃತ್ತಾಕಾರ ಕೂಡಾ ಆಕಾಶದಿಂದ ನೋಡಿದರೆ ಸ್ಪಷ್ಟವಾಗುತ್ತದೆ...ಸರಿ, ಹಾಗೆ ಅದನ್ನು ನೋಡಿದವರಾರು?





**ಮಾಯನ್ ನಾಗರೀಕತೆಯ ಅನ್ಯಗ್ರಹ ಜೀವಿ ಶಿಲೆಗಳು:**

ದ.ಆಮೇರಿಕಾದ ಬಹಳ ಮುಂದುವರೆದ ಪುರಾತನ ನಾಗರೀಕತೆ ಎನ್ನುವ ಮಾಯನ್ನರು ಕೆತ್ತಿರುವ ಅವರ ದೇವತೆಗಳ ಮೂರ್ತಿಯನ್ನು ನೋಡಿ. ಈ ರೀತಿ ಅವರಿಗೆ ಕಂಡುಬಂದವರನ್ನು ನೋಡಿದರೆ ಈಗಿನ ನಮ್ಮ ಗಗನಯಾತ್ರಿಗಳ ಪೋಷಾಕಿಗೆ ಹೋಲಿಕೆಯಿಲ್ಲವೆ? >>>

>>>ಎಲ್ಲಿಂದ ಬಂದರಿವರು?...ಹೆಲ್ಮೆಟ್, ಕವಚ ಕುಂಡಲ!..ಅದೇನು ಕ್ಯಾಮೆರಾವೆ? ಆ ಶಿಲ್ಪಿ ಇದನ್ನು ನೋಡಿದ್ದನೆ? (ಯೋಚಿಸಿ!)



ಪೆಸಿಫಿಕ್ ಸಾಗರದ ಅತ್ಯಂತ ದುರ್ಗಮ ಮೂಲೆಯಾದ ಈಸ್ಟರ್ ಐಲೆಂಡ್ ಎಂಬಲ್ಲಿ ಒಟ್ಟು 900 ಕಲ್ಲಿನ ಮುಖದ ಬೃಹತ್ ಶಿಲೆಗಳಿವೆ..1000 ವರ್ಷ ಹಳೆಯದು...ಒಂದೊಂದೂ 13 ಅಡಿ ಎತ್ತರವಿದ್ದು 14 ಟನ್ ಭಾರವಿದೆಯಂತೆ...ಯಾರು? ಯಾವಾಗ? ಯಾಕೆ? ಯಾರಿಗೂ ತಿಳಿಯದು..ಆದರೆ ಅನ್ಯಗ್ರಹಜೀವಿಗಳ ಉಪಕಾರದ ಜ್ಞಾಪಕಾರ್ಥವಾಗಿ ಪುರಾತನರು ಅವರ ಸಹಾಯದಿಂದಲೇ ಕಟ್ಟಿದರಂತೆ!...ಪಕ್ಕದಲ್ಲಿದ್ದ ಹಳೇ ಜ್ವಾಲಾಮುಖಿಯ ಲಾವಾರಸದ ಗಣಿಯಿಂದ ಈ ಕಲ್ಲುಗಳನ್ನು ತಯಾರಿಸಿ ಕಟ್ಟಿದರಂತೆ... ಹೇಗೋ?...ಅಬ್ಬಾ!... ಇದನ್ನು ಮೊದಲು ಯೂರೋಪಿಯನ್ನರು ನೋಡಿದಾಗ ಈ ದ್ವೀಪ ನಿರ್ಜನವಾಗಿತ್ತು!





ಕ್ರಿಶ್ಚಿಯನ್ ಧರ್ಮದ 15ನೇ ಶತಮಾನದ ಒಂದು ಜನಪ್ರಿಯ ಚಿತ್ರ- "ಮೆಡೊನಾ –ಸೆಂಟ್.ಗಿಯೋವನ್ನಿಯೋ" ಚಿತ್ರದಲ್ಲಿ ಮದರ್ ಮೇರಿ ಹಿಂದೆ ಆಗಸದಲ್ಲಿ ಗಗನನೌಕೆಯಲ್ಲಿ ಕುಳಿತು ಎಲ್ಲವನ್ನು ವೀಕ್ಷಿಸುತ್ತಿರುವ ದೇವತೆಗಳ್ಯಾರು?...2018 ವರ್ಷದ ಹಿಂದಿನ ಘಟನೆಯಲ್ಲೂ? ಅದನ್ನು ಕೈಯೆತ್ತಿ ನೋಡುತ್ತಿದ್ದಾನೊಬ್ಬ, ಪಕ್ಕದಲ್ಲಿ ಅದನ್ನು ಕಂಡು ನಾಯಿ ಬೊಗಳುತ್ತಿದೆ...ಅನುಮಾನವೇ ಇಲ್ಲ...



ಕೊನೆಗೆ ನಮ್ಮ ರಾಮಾಯಣದ ಪುಷ್ಪಕ ವಿಮಾನದ ಚಿತ್ರ...ಓಹ್, ಹಾಗಾದರೆ ಈಜಿಪ್ಟಿನವರೂ, ವಾಲ್ಮೀಕಿಯೂ, ಕ್ರಿಶ್ಚಿಯನ್ನರು ಸಮಕಾಲೀನರಾಗಿದ್ದು ಪರಸ್ಪರ whatsapp ಮಾಡುತ್ತಿದ್ದರೋ ವಿವರಗಳನ್ನು?☺ ಎಲ್ಲರಿಗೂ ಒಂದೇ ಬಗೆಯ ಕಲ್ಪನೆ ಮೂಡಿದ್ದು ಹೇಗೋ?...ಕಲ್ಪನೆಯಲ್ಲದೇ ಸತ್ಯ ನಿರೂಪಣೆಯೇ ಆಗಿದ್ದರೆ?...ಪುರಾತನರು ಹೇಳಿದ್ದೆಲ್ಲಾ ಸುಳ್ಳು, ನಾವು ಮಾತ್ರ 100% ಸತ್ಯಸಂಧರು ಎಂದು ಕೊಚ್ಚಿಕೊಳ್ಳಲು ಆಧಾರವೇನೂ ಇಲ್ಲವಲ್ಲ!



**ನಮ್ಮ ಪುರಾಣದ ಪ್ರಕಾರ ನಮ್ಮದಲ್ಲದೇ ಹಲವು ಅನ್ಯಲೋಕಗಳಿವೆಯೆಂಬ ಮಾಹಿತಿಯಿದ್ದೇ ಇದೆ., "ಅತಲ-ವಿತಳ- ಸುತಳ- ತಳಾತಳ - ರಸಾತಳ ಇತ್ಯಾದಿ ಲೋಕದಲ್ಲೆಲ್ಲಿದ್ದರೂ ನಮ್ಮ ಶತ್ರುವನ್ನು ಹುಡುಕಿತರುವೆ" ಎಂದು ಕೆಲವು ಪೌರಾಣಿಕ ಕತೆಗಳಲ್ಲಿ ನಾಯಕರು ಕೊಚ್ಚಿಕೊಳ್ಳುತ್ತಾರೆ, ಅಲ್ಲವೆ?**

**(ಆದರೆ ವಿಚಿತ್ರವೆಂದರೆ, ಒಮ್ಮೆ ಎಲ್ಲೋ ಓದಿದ್ದೆ, ಅಮೆರಿಕದ ಸೈನ್ಯ ಒಮ್ಮೆ ರಿಲೀಸ್ ಮಾಡಿದ್ದ ಪಬ್ಲಿಕ್ ಮಾಹಿತಿಯಲ್ಲಿ ಒಬ್ಬ ಸೇನಾನಾಯಕ ಮತ್ತು ಅವನ ಸಂಗಡಿಗರ ಮುಂದೆ ಧುತ್ತೆಂದು ಮಿಂಚು ಹೊಳೆವಂತಾ 1 ನೌಕೆ ಇಳಿದು ನಿಂತಿತಂತೆ... ಅದರಿಂದ ಮಾನವನಿಗಿಂತಾ ಎತ್ತರವಿದ್ದ ಜೀವಿಗಳಿಳಿದು ಅವರಿಗೆ 'ನಾವು ವಿತಳ (Vitala) ಲೋಕದಿಂದ ಬಂದೆವು...ನಿಮ್ಮ ಸ್ನೇಹಿತರು, ಹೆದರಬೇಡಿ' ಎಂದರಂತೆ. ಮತ್ತೆ ಹೇಗೆ?...ಅಮೇರಿಕನ್ನರಂತೂ ಈ ಅತಳ-ವಿತಳ ಲೋಕದ ಬಗ್ಗೆ ಓದಿರಲಾರರು. ಆದರೆ ಮೇಲಧಿಕಾರಿಗಳು ಇದನ್ನು ನಂಬಲಿಲ್ಲ... ಈ ಮಾಹಿತಿ ಮತ್ತೆ ಸಿಕ್ಕರೆ ಲಿಂಕ್ ಕೊಡುವೆ )**

ಇದೆಲ್ಲಾ ಉತ್ತಮ ಆಸಕ್ತಿಕರ ಹಿನ್ನೆಲೆಯಾಯಿತು...ಸರಿ!

ಆದರೆ ಇದೇ ನನ್ನ ಮುಖ್ಯವಿಚಾರವಲ್ಲ.. ಗ್ರಂಥಸೂಚಿಯಲ್ಲಿ ( ಕೊನೆಯಲ್ಲಿ) ಈ ಎಲ್ಲಾ ಪುಸ್ತಕಗಳ ರೆಫೆರೆನ್ಸ್ ಕೊಡುತ್ತೇನೆ. ಮನಃತೃಪ್ತಿಯಾಗುವಷ್ಟು ಓದಿಕೊಂಡು ನಿಂನಿಮ್ಮ ನಿರ್ಧಾರಕ್ಕೆ ಬನ್ನಿ...

**ನಾವು ಮುಂದೆ ಹೋಗುವಾ...20-21 ನೆ ಶತಮಾನದ ಸಜೀವವಾಗಿ ಅನ್ಯಗ್ರಹ ಜೀವಿಗಳನ್ನು ಕಂಡವರ ಮಾಹಿತಿ ಭಂಡಾರದತ್ತ...ಬನ್ನಿ!**

# ಅಧ್ಯಾಯ 3 .20ನೇ ಶತಮಾನದ ಭೇಟಿ ದಾಖಲೆಗಳು:



## UFO ಎಂದರೇನು?

**Unidentified Flying Objects** ಎಂಬ ಹೊಸ ಲೇಬಲ್ ಮೊದಲು 1953ರಲ್ಲಿ ಅಮೆರಿಕಾದ ವಾಯುಪಡೆಯು ನೀಡಿತು. ಅಂದರೆ ಇದು ನಮಗೆ ತಿಳಿದ ವಿಮಾನ ಸಂಬಂಧಿತ ಏರೋಡೈನಮಿಕ್ ತಂತ್ರಜ್ಞಾನದಿಂದ ಹೊರತಾದ, ನಮ್ಮ ವಿಜ್ಞಾನದ ಪರಿಧಿಯಲ್ಲಿ ನಿರೂಪಿಸಲಾಗದ, ಅರ್ಥಮಾಡಿಕೊಳ್ಳಲಾರದ ಭೂಮಿಯೇತರ ತಂತ್ರಜ್ಞಾನದ ನಮೂನೆ ಎಂದರ್ಥ...

ಕ್ಯಾ. ಎಡ್ವರ್ಡ್ ರುಪೆಲ್ಟ್ ಎಂಬ ಸೇನಾಧಿಕಾರಿ ತಾನು ಜವಾಬ್ದಾರಿ ವಹಿಸಿದ್ದ ಅಮೆರಿಕನ್ ಸರಕಾರದ ಅಧಿಕೃತ ಅನ್ವೇಷಣಾ ಯೋಜನೆಯಾದ "ಪ್ರಾಜೆಕ್ಟ್ ಬ್ಲೂ ಬುಕ್" ನಲ್ಲಿ ಮೊದಲು ಸಂಕ್ಷಿಪ್ತವಾಗಿ UFO ಎಂಬ ನಾಮಕರಣ ಮಾಡಿದನು. ವಾಯುಬಲವಿಜ್ಞಾನದ ಪದಗುಚ್ಚವನ್ನು ತಿಳಿಯದ ಜನಸಾಮಾನ್ಯರು ಅದನ್ನೇ ಫ್ಲಯಿಂಗ್ ಸಾಸರ್ ಅಥವಾ ಹಾರುವ ತಟ್ಟೆ ಎಂದು ಜನಪ್ರಿಯವಾಗಿ ಕರೆಯಲಾರಂಭಿಸಿದರು.

## 3.1 ಅಮೆರಿಕಾದಲ್ಲಿ ಕಾಣಿಸಿದ ಆಗಸದ ದೈತ್ಯರು

ಹೆಚ್ಚಿನ ಇಂತಾ ವರದಿಗಳು USA ದೇಶದಲ್ಲಿ ಹುಟ್ಟುತ್ತಿದ್ದರಿಂದ ನಮ್ಮ ಚರ್ಚೆಯನ್ನು ಅಲ್ಲಿಗೇ ಬಹುತೇಕ ಸೀಮಿತ ಮಾಡಿದ್ದೇನೆ. ಕೆಲವು ಯೂರೋಪಿನದೂ ಇವೆ...ಆಮೇಲೆ ಅಮೆರಿಕಾ ಅಲ್ಲದೇ ಇನ್ನೆಲ್ಲಿ, ಯಾಕೆ ಅಮೇರಿಕದಲ್ಲೇ ಹೆಚ್ಚು ಎಂಬ ಪ್ರಶ್ನೆಗೂ ಉತ್ತರ ಹುಡುಕೋಣ.

ಹಲವು ಬಗೆಯ ವಿಮಾನಗಳು, ಬೇರೆ ಬೇರೆ ರೀತಿಯ ಹವಾಮಾನ, ದೇಶ, ಆಗಸದಲ್ಲಿ , ಪ್ರಕಾಶದಲ್ಲಿ, ಕತ್ತಲಲ್ಲಿ, ಮಬ್ಬುಗತ್ತಲೆಯಲ್ಲಿ, ಹಿಮಪಾತದಲ್ಲಿ, ಮಳೆಯಲ್ಲಿ ಹೀಗೆಲ್ಲಾ ವ್ಯತ್ಯಾಸವುಳ್ಳ ಸ್ಥಿತಿಗಳಲ್ಲಿ ಚಲಿಸುವಾಗಲೂ ಜನರ ಕಣ್ಣಿಂದ ಕಣ್ಣಿಗೆ ದೋಷದಿಂದಲೂ ಅವರವರಿಗೆ ಯಾವುದೋ ಅನ್ಯ ಬಗೆಯ ವಸ್ತುವೊಂದು ಆಗಸದಲ್ಲಿ ಹಾರುತ್ತಿದೆ ಎನಿಸಿರಬಹುದು...

ಹಾಗೆಯೇ ನೋಡುಗರ ವಯಸ್ಸು, ಮಾದಕ ದ್ರವ್ಯ ಸೇವಿಸಿದ/ ಮದ್ಯದ ನಶೆಯ ಪ್ರಭಾವವೋ, ಮಾನಸಿಕ ಸ್ಥಿತಿಯೋ, ಸುಳ್ಳು ಸುದ್ದಿ ಹಬ್ಬಿಸುವ ಪ್ರವೃತ್ತಿಯೋ ಅಥವಾ ಸಂಪೂರ್ಣ ಅಜ್ಞಾನವೋ ಸಹಾ ಇದರೊಂದಿಗೆ ತಳುಕು ಹಾಕಿಕೊಂಡು ಹಲವು ಬಾರಿ ಸುಳ್ಳು ವರದಿಗಳಿಗೆ ಮನೆ ಮಾಡಿಕೊಟ್ಟಿದ್ದೂ ಉಂಟು. ಹಾಗಂತಲೇ ಸರಕಾರಿ ವಲಯಗಳು ಇಂತಾ ಅನ್ಯಗ್ರಹ ವಸ್ತು/ವಿಚಿತ್ರ ವಿಮಾನಗಳ ವೀಕ್ಷಣೆಯ ವರದಿಗಳನ್ನು ಸಾರಾಸಗಟಾಗಿ ನಿರಾಕರಿಸುತ್ತಾ , "ಇದೆಲ್ಲಾ ನಿಮ್ಮ ಭ್ರಮೆ , ಅಥವಾ ದೃಷ್ಟಿ ದೋಷ" ಎಂತಲೋ, ಅಥವಾ

"ನಾವು ಹೊಸ ಬಗೆಯ ಪ್ರಾಯೋಗಿಕ ವೆದರ್ ಬಲೂನ್ ಹಾರಿಬಿಟ್ಟೆವು, ನಿಮಗರ್ಥವಾಗಲಿಲ್ಲ" ಎಂದೋ ಎಲ್ಲವನ್ನೂ ಮುಚ್ಚಿಡುತ್ತಲೇ ಬಂದರು...

ಮೊದಮೊದಲು "ಕಣ್ಣಾರೆ ಕಂಡೆವು" ಎಂಬ ವರದಿಗಳನ್ನು ನಿರಾಕರಿಸುವುದು ಸುಲಭವಾಗಿಯೂ ಇತ್ತು, ಯಾಕೆಂದರೆ ಸರಕಾರದ ಸಾಕ್ಷಿ ಅಥವಾ ವರದಿಗಾರರ್ಯಾರೂ ಅವರ ಜತೆಯಲ್ಲಿಲ್ಲದ್ದ ಸಂಧರ್ಭದಲ್ಲಿ.

ಯಾವಾಗ ಛಾಯಾಗ್ರಹಣ ತಂತ್ರಜ್ಞಾನ ಬೆಳೆಯಿತೋ, ಮುಂದುವರೆಯಿತೋ ಆಗ (1960 ರ ದಶಕದಲ್ಲಿ) ಹಲವು ಬಗೆಯ ಹಾರುವ ವಾಹನಗಳ ಚಿತ್ರ ವಿಚಿತ್ರ ದೃಶ್ಯಗಳು ವೀಕ್ಷಕರ ಕ್ಯಾಮೆರಾ ಕಣ್ಣಿನಲ್ಲಿ ಸೆರೆಯಾಗತೊಡಗಿದ್ದವು. ಪತ್ರಿಕೆ ಮತ್ತು ಟಿವಿ ಮಾಧ್ಯಮದಲ್ಲಿ ಬಿಸಿ ಬಿಸಿ ಸುದ್ದಿಗೆ ಗ್ರಾಸವಾಗತೊಡಗಿದವು. ಆಗ ಅಮೆರಿಕನ್ ಸಮಾಜದಲ್ಲಿ ಒಂದು ಸಂಚಲನ ಉಂಟಾಯಿತು. ಸರಕಾರ ನಿರಾಕರಸಿದ್ದಷ್ಟೂ, ಮೌನವಹಿಸಿದ್ದಷ್ಟೂ ಸುದ್ದಿಗಳ ಸಂಖ್ಯೆಯೂ ಗಣನೀಯವಾಗಿ ಏರಿತು.

ಒಬ್ಬಿಬ್ಬರಲ್ಲ, ಊರೆಲ್ಲಾ ಅದನ್ನು ನೋಡಿದಂತಾ ಘಟನೆಗಳು, ಸುದ್ದಿ ಮಾಧ್ಯಮದವರೂ ಪ್ರತ್ಯಕ್ಷ ಕಂಡು ವರದಿ ಮಾಡಿದಂತಾ ಸಂಧರ್ಭಗಳೂ ಹೆಚ್ಚಾಗುತ್ತಲೇ ಹೋದವು...ಸರಕಾರದ ಮೌನ ಜನರಿಗೆ ಅಸಹನೀಯವಾಯಿತು, ಅದರಲ್ಲಿ ಯಾವುದೋ ಷಡ್ಯಂತ್ರವಿದೆಯೆಂಬ ಶಂಕೆ ಬಲವಾಗಿ ಬೆಳೆಯತೊಡಗಿತು.

ಆಗ ಹೊಸ ಬೆಳವಣಿಗೆಗಳಾಗತೊಡಗಿದವು. ಅದೇಕೋ ಎರಡನೇ ಮಹಾಯುದ್ಧ ಸಮಯದಲ್ಲಿ ಭೂಮಿಯಲ್ಲಿ ತೀವ್ರ ಪ್ರಾನಹಾನಿ ವಸ್ತುಹಾನಿಯಾಗುತ್ತಿದ್ದಾಗ ಧುತ್ತೆಂದು ಕಾಣಿಸಿಕೊಳ್ಳುವ ಗಗನನೌಕೆಗಳು ವಾಯುಸೇನೆಯ ಶಸ್ತ್ರಾಸ್ತ್ರಗಾರದ ಬಳಿ ಆಗಾಗ ಚಕಿತರಾಗುವಂತೆ ಗಿರಕಿ ಹೊಡೆದು ಹಾಜರಿ ಹಾಕಿದಂತೆ ಬಂದು ಮಾಯವಾಗತೊಡಗಿದ್ದವಿ ಸಾರ್ವಜನಿಕರಲ್ಲದೇ ತಾಂತ್ರಿಕವಾಗಿ ತರಬೇತು ಹೊಂದಿದ ಕೆಲವು ವಿಮಾನದ ಪೈಲೆಟ್ಟುಗಳು, ಏರ್ ಫೋರ್ಸ್ ಪೈಲೆಟ್ಟುಗಳು ಯಾವಾಗ ತಮ್ಮ ಪಯಣದಲ್ಲಿ ಇಂತಾ ಗುರುತು ಹಿಡಿಯಲಾಗದಂತಾ ಹಾರುವ ವಾಹನಗಳನ್ನು ನೋಡಿದರೋ ತಮ್ಮ ಏರ್ ಟ್ರಾಫಿಕ್ ಕಂಟ್ರೊಲರಿಗೂ, ತಮ್ಮ ಮೇಲಧಿಕಾರಿಗಳಿಗೂ ವರದಿ ಮಾಡುತ್ತಲೇ ಹೋದವು.

ಕೆಲವು ಅಂತಾ ಘಟನೆಗಳನ್ನು ನಿವೃತ್ತರಾಗುವವರೆಗೆ ಯಾರಿಗೂ ಹೇಳಬಾರದೆಂಬ ವಾಗ್ದಾನ ತೆಗೆದುಕೊಂಡಿದ್ದ ಸೇನೆಯವರಿಂದ ಹೊರಬಂದಂತೆಯೆ ಬಂಧಮುಕ್ತರಾದಂತೆ ಹಲವಾರು ನಂಬಿಕಾರ್ಹ ಅಧಿಕಾರಿಗಳು ತಮ್ಮ ಜತೆ ನಡೆದ ಅಲೌಕಿಕ ಅನ್ಯಗ್ರಹ ವಾಹನಾದಿಗಳ ಘಟನಾವಳಿಯ ವೃತ್ತಾಂತವನ್ನು ಸಮಾಜದ ಮುಂದೆ ಬಿಚ್ಚಿಟ್ಟರು. ಅವೆಲ್ಲಾ ಹಲವು ಕೌತುಕಮಯ ಪ್ರತಿಕ್ರಿಯೆಗೆ ನಾಂದಿಯಾಗಿ ಜನಾಸಕ್ತಿ ಹೆಚ್ಚತೊಡಗಿತು.

ಅದರಲ್ಲಿ ಕೆಲವರ ವರದಿಗಳನ್ನು ನಿಮ್ಮ ಆಸಕ್ತಿಗಾಗಿ ಸಂಕ್ಷಿಪ್ತವಾಗಿ ಬರೆದಿದ್ದೇನೆ:

1) **(1970 ರ ದಶಕದಲ್ಲಿ... ಅಮೆರಿಕನ್ ಫ್ಲೈಟ್ ವಿಮಾನದ ಪೈಲೆಟ್ ಹೆಸರು ಮತ್ತು ಊರಿನ ಬಗ್ಗೆ ಮಾಹಿತಿ ಗುಪ್ತವಾಗಿಡಲಾಗಿದೆ, ಆತನ ಕೋರಿಕೆಯ ಮೇಲೆ (ಜೀವಭಯದ ಕಾರಣ!)...ಅವನು ಪತ್ರಿಕೆಗಳಿಗೆ ನೀಡಿದ ಸಂದರ್ಶನ ಪ್ರಕಟವಾಗಿತ್ತು):**

   ನಾನು ಮೋಡರಹಿತ ಹವಾಮಾನದಲ್ಲಿ ಬೆಳಿಗಿನ 11ರ ಹೊತ್ತು ಇಂತಾ ( ಒಂದು ಅಮೆರಿಕಾ ನಗರ) ವಿಮಾನನಿಲ್ದಾಣಕ್ಕೆ ಹೊರಟಿದ್ದೆ. ಆಗ ಮಾರ್ಗ ಮಧ್ಯೆಯಲ್ಲಿ ಇದ್ದಕ್ಕಿದ್ದಂತೇ ನನ್ನೆದುರು ಯಾವುದೋ ದೈತ್ಯಾಕಾರವಾದ ಅತಿ ವೇಗದಲ್ಲಿ ಚಿತ್ರವಿಚಿತ್ರ ಜಿಗಿತಗಳನ್ನು ಮಾಡುತ್ತಿದ್ದ ನೌಕೆಯೊಂದು ಕಂಡಿತು. ಅದು ಸೆಮಿ-ಗೋಲಾಕಾರವಾದ ತಟ್ಟೆಯಂತಿದ್ದು ಬೆಳ್ಳಿಯಂತೆ ಹೊಳೆಯುತ್ತಿತ್ತು, ನನ್ನ ವಿಮಾನವನ್ನು ಮುಂದಿನಿಂದ ಸರಿಗಟ್ಟುತ್ತಾ ಜತೆಗೇ ಸಾಗಿತ್ತು. ಕೆಲವೊಮ್ಮೆ ಅಚ್ಚರಿಗೊಳಿಸುವಂತೆ ನನ್ನ ಬಲಕ್ಕೂ ಎಡಕ್ಕೂ ಸರ್ರನೆ ಸಾಗಿ ಬರುತ್ತಿತ್ತು. ಬಹಳ ಪ್ರಕಾಶಮಾನವಾದ ತಿರುಗುವ ಬಣ್ಣದ ದೀಪಗಳು ಆ ಹಗಲಿನ ಬಿಸಿಲಿನಲ್ಲೂ ಕಣ್ಣಿಗೆ ರಾಚುವಂತಿತ್ತು. ಅದು ನನ್ನ ವಿಮಾನದ ರೇಂಜಿನ ಬಳಿ ಬಂದಾಗ ನನ್ನ ಪ್ಯಾನೆಲ್ಲಿನ ವಿದ್ಯುತ್ ಉಪಕರಣಗಳು, ಸಂಪರ್ಕ ಸಾಧನಗಳೆಲ್ಲಾ ಇದ್ದಕ್ಕಿದ್ದಂತೇ ನಿಂತುಹೋಗುತ್ತಿದ್ದವು. ಸ್ವಲ್ಪ ದೂರ ಹೋದಾಗ ಮತ್ತೆ ಎಲ್ಲಾ ಚಾಲನಯಲ್ಲಿರುತ್ತಿದವು. ನಾನು

ಇಂತಾ ಸನ್ನಿವೇಶವನ್ನು ಎಂದೂ ನಿರೀಕ್ಷಿಸಿರಲಿಲ್ಲ, ಯಾರೂ ನಮಗೆ ತರಬೇತಿ ಕೊಟ್ಟಿರಲೂ ಇಲ್ಲ. ನಾನು "ತಕ್ಷಣವೇ ಅಪಾಯವಿದೆ, ಇದ್ಯಾವ ವಿಮಾನವನ್ನು ನನ್ನ ಬಳಿ ಕಳಿಸಿದ್ದೀರಿ ಇಷ್ಟು ಸಮೀಪದ ರೇಂಜಿನಲ್ಲಿ, ಹೇಳಿ!" ಎಂದು ಹಲವು ಬಾರಿ ATC ಯನ್ನು ಕೇಳಿದೆ. ಅವರು "ಅಂತಾ ಯಾವ ವಿಮಾನವನ್ನು ಕಳಿಸಿಲ್ಲ, ಯಾವುದೂ ನಮ್ಮ ಇಲ್ಲಿನ ರೆಡಾರಿನಲ್ಲಿ ಕಾಣಿಸುತ್ತಲೂ ಇಲ್ಲ, ನಿನ್ನ ರೂಟ್ ಕ್ಲಿಯರ್ ಆಗಿದೆ" ಎಂದು ಹೇಳುತ್ತಲೆ ಬಂದರು. ಅಂದರೆ ಇದು ಯಾವುದೋ ಸಾಧಾರಣ ವಿಮಾನವಂತೂ ಅಲ್ಲ, ತಂತ್ರಜ್ಞಾನದಲ್ಲಿ ಬಹಳ ಮುಂದಿದೆ. ಯಾಕೆಂದರೆ ಅವರ ಕಣ್ಣಿಗೆ ಬೀಳುತ್ತಿಲ್ಲ, ನಾನು ಅದನ್ನು ಸಂಪರ್ಕಿಸಲು ಪ್ರಯತ್ನ ಮಾಡಿದರೆ ಸಂಪರ್ಕ ಕಟ್ ಆಗುತ್ತದೆ. ನಾನು ನನ್ನ ವಿಮಾನವನ್ನು ಇಳಿಸಿದರೆ ಅದೂ ಸರ್ರನೆ ನನ್ನ ಜತೆಯೇ ಸಮಾನಾಂತರದಲ್ಲಿ ಇಳಿಯಬಲ್ಲುದು, ಏರಿದರೆ, ತಿರುಗಿದರೂ ನನ್ನ ಜತೆಯಲ್ಲೇ ಇರಬಲ್ಲುದು... ಅದರ ಚಾಲಕ ನನ್ನ ಮನಸ್ಸನ್ನು ಓದುತ್ತಿರುವಂತೆ! ಇದೆಂತಾ ಸೋಜಿಗ, ನನಗೆ ಭಯವೇ ಆಯಿತು. ನಾನು ಅವನತ್ತ ಒಮ್ಮೆ ಚುರುಕಾಗಿ ತಿರುಗಿದಾಗ ಎಲ್ಲೊ ಅರೆ ಕ್ಷಣ ಮಾಯವಾಗಿಬಿಟ್ಟ, ನಾನು ಗಾಬರಿಯಿಂದ ಹುಡುಕಿದರೆ ಆ ದೊಡ್ಡ ನೌಕೆ ನನ್ನ ವಿಮಾನದ ಮೇಲೆ ಸರಿಯಾಗಿ ದೂರ ಕೊಟ್ಟು ಶಾಂತವಾಗಿ ಹಾರುತ್ತಿದೆ...ಹೇಗೆ ತಾನೆ ಈ ವಾಹನ ನಮಗೆ ಸಾಧ್ಯವೇ ಇಲ್ಲದ ಇಂತಾ ಸರ್ಕಸ್ಸುಗಳನ್ನು ಮ್ಯಾಜಿಕ್ಕಿನಂತೆ ಮಾಡಬಲ್ಲುದು?...ನನಗೆ ಅವನನ್ನು ಸೋಲಿಸುವ , ಜತೆ ಬಿಡಿಸುವ ಸಾಧ್ಯತೆ ಕಾಣಲೇ ಇಲ್ಲ. ಸುಮ್ಮನಾಗಿಬಿಟ್ಟೆ.. ಅದು ಗಾಳಿಯಲ್ಲಿ ಸ್ವಲ್ಪ ದೂರದಲ್ಲಿ ಸ್ಥಿರವಾಗಿ ನಿಂತು ಬಿಟ್ಟಿತು! ನನ್ನ ಕಂಗಳನ್ನೆ ನಾನು ನಂಬಲಿಲ್ಲ..ನಮ್ಮ ಏರೋ ಡೈನಮಿಕ್ಸ್ ಪ್ರಕಾರ ಹಾಗೆಲ್ಲ ಯಾರೂ ಗಾಳಿಯಲ್ಲಿ ಸ್ತಬ್ಧರಾಗಿ ಅಲುಗಾಡದೇ ನಿಲ್ಲಲು ಸಾಧ್ಯವಿಲ್ಲ. ಮತ್ತೆ ಅಷ್ಟೇ ಸಡನ್ನಾಗಿ ರೊಯ್ಯನೆ ತಿರುಗಿ ಮೇಲಕ್ಕೆ ಅನೂಹ್ಯವಾದ ವೇಗದಲ್ಲಿ ಹಾರಿ ಮಾಯವೇ ಆಗಿಬಿಟ್ಟಿತು. ಅಂದರೆ ಸೊನ್ನೆಯಿಂದ ಸಹಸ್ರಾರು ಕಿಮೀ ವೇಗಕ್ಕೆ ಒಮ್ಮೆಲೆ?!... ನನ್ನನ್ನು ಮಕ್ಕಳಾಟಿಕೆಯಂತೆ ಆಟವಾಡಿಸಿ ಪೀಡಿಸಿ ತಾನು ಅದೇನೂ ಗಮನಿಸಿತೋ, ಅದನ್ನು ಮುಗಿಸಿಕೊಂಡು ಅಸಾಧ್ಯ ವೇಗದಲ್ಲಿ, ನನಗಿಂತಾ 50-100 ಪಟ್ಟು ವೇಗದಲ್ಲಿ ಎಲ್ಲಿಗೋ ಹಾರಿ ಒಡನೆಯೇ ಕಾಣೆಯಾಯಿತು. ನಮ್ಮ ಭೂಮಿಯಲ್ಲಿ ಇಂತಾ ತಂತ್ರಜ್ಞಾನವಿರುವ ವಾಹನ ಇರಲು ಸಾಧ್ಯವೇ ಇಲ್ಲ...ಇದು ಎಲ್ಲಿಂದಲೋ ಬಂದು ಮತ್ತೆ ಮಾಯವಾಗಿದೆ...ಇಂದಿಗೂ ನೆನೆಸಿಕೊಂಡರೆ ನನಗೆ ಮೈ ರೋಮಾಂಚನವಾಗುತ್ತದೆ, ಇವೆಲ್ಲಾ ಹೇಗೆಂದು ವಿವರಿಸಲು ನಮಗೀಗಲೇ ಸಾಧ್ಯವಿಲ್ಲ ಎಂಬುದು ಖಚಿತ...

2) ಮಿಲಿಟರಿ ಆರ್ಕೈವಿನಿಂದ ಲಭಿಸಿದ 17 ವರ್ಷಾನಂತರದ ದಾಖಲೆ:-



1957 ಮೇ 20 ರಲ್ಲಿ ಇಂಗ್ಲೆಂಡಿನ ಮ್ಯಾನ್‌ಸ್ಟನ್ ರಾಯಲ್ ಏರ್ ಫೋರ್ಸ್ ಸ್ಟೇಷನ್ನಿನಿಂದ ವಿಮಾನದಲ್ಲಿ  ಹೊರಟ ಅಮೇರಿಕನ್ ಪೈಲೆಟ್ ಮತ್ತು ಸಹೋದ್ಯೋಗಿ ಬರೆದುಕೊಟ್ಟ  ಮೇಲಿನ ಈ ಚಿತ್ರವನ್ನು ಬರೆದು ನ್ಯಾಶನಲ್ ಆರ್ಕೈವ್ಸ್ ನಲ್ಲಿಟ್ಟಿತ್ತು, ಈಗ ಸಾರ್ವಜನಿಕವಾಗಿದೆ.

" ನನ್ನನ್ನೂ, ನನ್ನ ಸಹ ಪೈಲೆಟ್ಟನ್ನು ಕರೆದು ಲಂಡನ್ನಿನ 70 ಕಿಮೀ ದೂರದಲ್ಲಿ ಗಗನದಲ್ಲಿ ಹಾರುತ್ತಿರುವ ಭೂತಾಕಾರದ ಅನಾಮಧೇಯ ವಸ್ತುವನ್ನು ತಡೆದು ಅಲ್ಲೇ ಮುಗಿಸಿಬಿಡಲು ಮೇಲಧಿಕಾರಿಗಳು ಹೇಳಿದರು.

"ನಾವು ನೋಡಿದ ಈ ಹಾರುವ ವಾಹನ ಅತ್ಯಂತ ವಿಚಿತ್ರ ವರ್ತನೆಯನ್ನು ಆಗಸದಲ್ಲಿ ತೋರುತ್ತಿತ್ತು."ಎನ್ನುತ್ತಾನೆ ಈ ಹೆಸರು ಗುಪ್ತವಾಗಿಟ್ಟ ಪೈಲೆಟ್, 1988 ರಲ್ಲಿ UFO ತಜ್ಞರಿಗೆ ಕೊಟ್ಟ ಟೈಪ್ ಮಾಡಿದ ಪೇಪರ್ ವರದಿಯಲ್ಲಿ.:- "ಈ ವಾಹನ ಗಾಳಿಯಲ್ಲಿ ಸುಮ್ಮನೆ ತಾನಾಗಿಯೇ ಬಹಳ ಕಾಲ ನಿಂತಿದೆಯಂದೂ , ಅದನ್ನು ಮೊದಲು ಕಂಡ ಅಧಿಕಾರಿಗಳು ಆಶ್ಚರ್ಯ ಮತ್ತು ಗಾಬರಿಯಿಂದ ಹೇಳಿದ್ದರು.

"ನಮ್ಮನ್ನು ಮೋಡವಿದ್ದ ಅಂದಿನ ಆಗಸದಲ್ಲಿ ಪೂರ್ತಿ ವೇಗದಲ್ಲಿ ಹಾರಿ ಅದರತ್ತ 24 ರಾಕೆಟ್ ಗಳನ್ನು ಹೊಡೆದು ಬೀಳಿಸಲು ಆಜ್ಞೆ ಕೊಟ್ಟಿದ್ದರು. ನನ್ನ ಕಿವಿಗಳನ್ನೇ ನಂಬದೇ ಏನಂದಿರಿ ಎಂದು ಅವರನ್ನು ಮತ್ತೆ ಕೇಳಿದ್ದೆ!"

(ಈ ವರದಿ ಬಂದ ನಂತರ ಅಮೆರಿಕಾದ ಮಿಲ್ಟನ್ ಟೋರೇಸ್ ಎಂಬಾತ ಫ್ಲೋರಿಡಾದಿಂದ ಬ್ರಿಟನ್ನಿನ ಸ್ಕೈ ನ್ಯೂಸಿಗೆ 'ತಾನೇ ಆ ಪೈಲೆಟ್' ಎಂದು ಫೋನ್ ಮಾಡಿ ದೃಢಪಡಿಸಿದ್ದಾನೆ)

"ಆ ಹಾರುವ ವಸ್ತು ಬರೇ ನಮ್ಮ ರೆಡಾರ್ ಅಂಚಿನಲ್ಲಿ ಕಾಣುತ್ತಿದ್ದಂತೆಯೇ ಮರುಕ್ಷಣ ಪಕ್ಕದಲ್ಲಿ ಜುಯ್ಯನೆ ರಭಸವಾಗಿ ಹಾರಿಹೋಗಿತ್ತು.. ಅಂತಾ ವೇಗವನ್ನು ನಾನು ಎಲ್ಲಿಯೂ ಕಂಡಿಲ್ಲ, ಕೇಳಿಲ್ಲ... ನಮಗೆ ಅದರತ್ತ ರಾಕೆಟ್ ಫೈರ್ ಮಾಡಲು ಚಿಕ್ಕವಕಾಶವನ್ನೂ ಕೊಡಲಿಲ್ಲ...ಅರೆ ಕ್ಷಣದಲ್ಲಿ ನನ್ನನ್ನು ಹಿಂದೆ ಬಿಟ್ಟು ಎಲ್ಲಿಗೂ ಹಾರಿ ಮಾಯವಾಗಿತ್ತು. ನನಗೆ ಸ್ವಲ್ಪವೂ ಅರ್ಥವಾಗಲಿಲ್ಲ, ಹೇಗೆ ತಾನೆ ಆ ವಸ್ತು ಹಾಗೆ ಮಾಯವಾಗಿಬಿಟ್ಟಿತೆಂದು. ನನಗೆ :"ತಕ್ಷಣ ಹಾಗಾದರೆ ಮಿಶನ್ ಮುಗಿಯಿತು , ಇಳಿದು ಬಾ" ಎಂದರು ಕಮಾಂಡ್.. ನಾನು ಕೆಳಗೆ ಬಂದು ನಮ್ಮ ಅಧಿಕಾರಿಗಳಿಗೆ ಈ ವರದಿ ಕೊಟ್ಟೆ, ಯಾರೂ ಏನೂ ನನಗೆ ವಿವರ ಹೇಳಲಿಲ್ಲ, ಪ್ರತಿಕ್ರಿಯೆ ಕೊಡಲಿಲ್ಲ, ಅವರಿಗೆ ಏನೋ ಹೆಚ್ಚು ಗೊತ್ತಿತ್ತೆಂದು ನಾನು ಊಹಿಸಬಲ್ಲೆನಾಗಿದ್ದೆ. ಇದಕ್ಕೆಲ್ಲಾ ಸುಮ್ಮನಿರಬೇಕೆಂಬುದು ಏರ್ ಫೋರ್ಸಿನಲ್ಲಿ ಅಲಿಖಿತ ಶಾಸನ.."

3) ಈ ಮಿಲಿಟರಿ ಆರ್ಕೈವಿನಲ್ಲಿ 10,000 ಕ್ಕೂ ಹೆಚ್ಚು ಇಂತಾ ವರದಿಗಳಿವೆ. ಅದರಲ್ಲಿ ಇನ್ನೊಂದು ಕೇಸಿನಲ್ಲಿ ಅಲ್ಮೊಗೋರ್ಡೋ ನ 1950 ರ ಹೋಲೋಮನ್ ಏರ್ ಫೋರ್ಸ್ ಬೇಸಿನಲ್ಲಿ ಸ್ಪೆಶಲ್ ಇನ್ವೆಸ್ಟಿಗೇಷನ್ಸ್ ರವರು ವರದಿಯಲ್ಲಿ "ಒಂದು ನಕ್ಷತ್ರಾಕಾರದ ವಸ್ತು ಕಾಣುತ್ತಿದೆ, ಬಿಳಿಯಿಂದ ಹಸಿರು ಮತ್ತು ಕೆಂಪು ದೀಪಕ್ಕೆ ತಿರುಗುತ್ತಾ ಚಿಟ್ಟೆ ಹಾರುವಂತೆ ಎತ್ತೆತ್ತಲೋ ಯದ್ವತದ್ವಾ ಹಾರುತ್ತಿದೆ. ಯಾವ ವಿಮಾನದಂತಾ ವಾಹನವೂ ಹೀಗೆಲ್ಲಾ ಹಾರಲಾಗದು" ಎಂದಿದ್ದಾರೆ.

4) ಒಂದು ನಿಜವಾದ ಘಟನೆಯ ಚಿತ್ರೀಕರಿಸಿದ ಯುಟ್ಯೂಬ್ ವಿಡಿಯೋ ನೋಡಿ: https://www.youtube.com/watch?v=3RlbqOl_4NA

5) 1965 ರಲ್ಲಿ ಏರ್ ಫೋರ್ಸ್ ಮೇಜರ್ ಜ್ಯಾಕ್ ಬಾಂಡ್ ರವರು ರೈಟ್ –ಪ್ಯಾಟರ್ಸನ್ ನಿಲ್ದಾಣದಿಂದ ಹೊರಟ ವಿಮಾನಯಾನದಲ್ಲಿ ಒಂದು ವಸ್ತುವು ಸೈನ್ ವೇವ್ ತರಹ ವಂಕಿಯಾಗಿ ( )ಹಾರುತ್ತ ಬರುತ್ತಿದೆ, ಏನು ಮಾಡಬೇಕು ಎಂದು ಕಮಾಂಡನ್ನು ಕೇಳಿದ ವರದಿಯಿದೆ. "ಅದು ಏರಿಳಿಯುವಾಗ ಬಿಳಿ ಮತು ಗ್ರೇ ಬಣ್ಣವನ್ನು ತಾನಾಗಿಯೇ ಬದಲಿಸಿಕೊಳ್ಳುತ್ತಾ ಕೊನೆಗೆ ದೂರದ ದಿಗಂತಕ್ಕೆ 600 ನಾಟಿಕಲ್ ಮೈಲಿ ವೇಗದಲ್ಲಿ ಹಾರಿ ಕಾಣೆಯಾಯಿತು, ಇದೇನು?" ಎಂದಿದ್ದಾರೆ.

6) ಫ್ರಾನ್ಸ್ ದೇಶದಲ್ಲಿ ಇಂತಾ ಸರಕಾರಿ ವರದಿಗಳನ್ನು ಸಾರ್ವಜನಿಕರಿಗೆ ಮುಕ್ತ ಮಾಡಿದಾಗ ಅಲ್ಲಿ 9% ಮಾತ್ರ ಹಾರುವ ತಟ್ಟೆಗಳ ಕೇಸುಗಳನ್ನು "ಕಷ್ಟಪಟ್ಟು" ಹೇಗಾದರೂ ವಿವರಿಸಲಾಗಿದೆ. ಮಿಕ್ಕವನ್ನು ಅವರು ಮುಚ್ಚಿಡಲಾಗಲೇ ಇಲ್ಲ. ಉದಾಹರಣೆಗೆ..1994 ರಲ್ಲಿ ಏರ್ ಫ್ರಾನ್ಸ್ ವಿಮಾನವೊಂದು ಗಗನದಲ್ಲಿದ್ದಾಗ ವಿಮಾನದಲ್ಲಿದ್ದವರೆಲ್ಲಾ ನೋಡಿದ್ದು- "ದೊಡ್ಡ ಬ್ರೌನ್ ಮತ್ತು ಕೆಂಪು ಶೇಡ್ ಇದ್ದ ತಟ್ಟೆಯಂತಾ ವಾಹನವೊಂದು ನಮ್ಮ ಮುಂದೆ ದಿಗಂತದಲ್ಲಿ ತೇಲುತ್ತಿತ್ತು. ಎಷ್ಟು ಪ್ರಯತ್ನ ಪಟ್ಟರೂ ಅದನ್ನು ಬಲೂನ್, ಪ್ರಯೋಗದ ವಸ್ತು ಎಂದೋ ಕರೆಯಲಾಗಲಿಲ್ಲ. ಏಕೆಂದರೆ ಅದು ತನ್ನ ಆಕಾರ ( ಶೇಪ್) ಅನ್ನೇ ಬದಲಿಸುತ್ತಾ ಇರುತ್ತಿತ್ತು. ಇದುವರೆಗೂ ಅದನ್ನು ಯಾರೂ ವಿವರಿಸಲಾಗಿಲ್ಲ"

7) 

ಮೇಲಿನದು ಬ್ರೆಜಿಲ್ ದೇಶದಲ್ಲಿ 1958 ಜನವರಿ 16 ರಂದು IGY reseach vessel , ಟ್ರಿನಿಡೇಡ್ ಐಲ್ ಎಂಬ ದ್ವೀಪದ ಬಳಿ ಆಗಸದಲ್ಲಿ ಹಲವಾರು ನೇವಿ ಮತ್ತು ಏರ್ ಫೋರ್ಸ್ ಅಧಿಕಾರಿಗಳು ಒಟ್ಟಿಗೇ ಕಂಡದ್ದನ್ನು ಈ ಮೇಲಿನಂತೆ ಫೋಟೋ ತೆಗೆದು ಮಾಧ್ಯಮಕ್ಕೆ ಕೊಟ್ಟು ಅದನ್ನು "ಫೋಹಾ ಡಾ ಮನೋ" ಎಂಬ ಪತ್ರಿಕೆಯಲ್ಲಿ 1958 ರಲ್ಲಿ ಪ್ರಕಟಿಸುವ ಮುನ್ನ ಅಲ್ಲಿನ ಸರಕಾರದ ಮಂತ್ರಿಗಳು ಮತ್ತು ಪ್ರೆಸಿಡೆಂಟ್ ಅಧಿಕೃತ ಒಪ್ಪಿಗೆ ಪಡೆದಿತ್ತು...ಇದು ಸರಕಾರಿ ದಾಖಲೆಯಲ್ಲಿ 'ವಿವರಿಸಲಾಗದ ಕೇಸ್' ಎಂದಿದೆ.

8) THE NATIONAL INVESTIGATIONS COMMITTEE ON AERIAL PHENOMENA ( NICAP) ಎಂಬ ವರಿಷ್ಟ ಡಿಫೆನ್ಸ್ ಮತ್ತು ತಜ್ಞರ ಸಮಿತಿಯೊಂದು ಬಹು ದೊಡ್ಡ ಶೋಧನಾತ್ಮಕ ರಿಪೋರ್ಟನ್ನು ಅಮೇರಿಕಾದಲ್ಲಿ ತಯಾರಿಸಿತು. ಅದರಲ್ಲಿ 1960 ರಲ್ಲಿ CIA ದ ನಿವೃತ್ತ ಅಡ್ಮಿರಲ್ ಹಿಲ್ಲೆನ್ಕೊಟ್ಟರ್ ಯು ಎಸ್ ಎನ್ , ಎಂಬವರ ವರದಿಯಲ್ಲಿ " ನಾವು ಈ UFO ಎಂಬುವ ವಿಚಾರವನ್ನು ಗಂಭೀರವಾಗಿ ಪರಿಗಣಿಸಿ ಉತ್ತರ ಕಂಡುಹಿಡಿಯಲೇಬೇಕು" ಎಂದಿದ್ದಾರೆ. ಆದರೆ ಎರಡನೇ ವಿಶ್ವಯುದ್ಧದ ಸಮಯದಲ್ಲೇ ಯುದ್ಧಭೂಮಿಯ ವಾಯು ಸೇನಾ ನೆಲೆಗಳ ಮೇಲೆ ಇದ್ದಕ್ಕಿದ್ದಂತೆ ಹೆಚ್ಚೆಚ್ಚು ಹಾರುವ ತಟ್ಟೆಗಳು ಆಗಸದಲ್ಲಿ ಕಾಣಿದ್ದರ ಬಗ್ಗೆ-

"ನನಗೆ ಖಚಿತವಾಗಿ ಗೊತ್ತಿರುವ ಹಾಗೆ, ಆಗ ರಷ್ಯಾ ಬಳಿಯಾಗಲಿ, ನಮ್ಮ ಬಳಿಯಾಗಲೀ ಆ ಹಾರುವ ತಟ್ಟೆಗಳ ವೇಗ ಮತ್ತು ಚಲನೆಯ ಹತ್ತಿರ-ಹತ್ತಿರವೂ ಬರುವ ತಂತ್ರಜ್ಞಾನವಾಗಲಿ, ಉದ್ದೇಶವಾಗಲೀ ಇರಲಿಲ್ಲ. ಅಷ್ಟೇ ಏಕೆ, ಈಗಲೂ ಇಲ್ಲ" ಎಂದು ಮುಕ್ತಾಯ ಮಾಡಿದ್ದಾರೆ.

ಅದರಲ್ಲೇ:

ಆಗಸ್ಟ್ 1960, 13-18ನೇ ತಾರೀಕಿನ ನಡುವೆ ಹಾರುವ ತಟ್ಟೆ ಅಥವಾ ಅನ್ಯಗ್ರಹ ವಾಹನಗಳ 18 ಘಟನೆಗಳು ಅಮೆರಿಕದ 30 ಶಹರುಗಳಲ್ಲಿ ವರದಿಯಾಯಿತು. ಅದರಲ್ಲಿ 14 ಜನ ಪೋಲಿಸ್ ಅಧಿಕಾರಿಗಳು ರಿಪೋರ್ಟ್ ಫೈಲ್ ಮಾಡಿದ್ದರು.

ಆಗಸ್ಟ್ 13 ರ "ಬಹುಮುಖ್ಯ" ಎಂದು ಫೈಲ್ ಮಾಡಿದ ವರದಿಯಲ್ಲಿ ರಾತ್ರಿ 11.50 ( ಪಸಿಫಿಕ್ ಟೈಮ್) ಸಮಯಕ್ಕೆ ಆಫೀಸರ್ ಚಾರ್ಲ್ಸ್ ಕಾರ್ಸನ್ ಮತ್ತು ಸ್ಟ್ಯಾನ್ಲಿ ಸ್ಕಾಟ್ ಇಬ್ಬರೂ ಬ್ಲಫ್ ಎಂಬ ಪ್ರದೇಶದಲ್ಲಿ ಅಕಸ್ಮಾತಾಗಿ ಕೆಲವೊಮ್ಮೆ ಓವರ್ ಸ್ಪೀಡ್ ಮಾಡುವ ಮೋಟರ್ ಸೈಕಲ್ ಸವಾರರನ್ನು ಹಿಡಿಯಲು ನಿಂತಿದ್ದಾಗ, ಆಕಾಶದಲ್ಲಿ ತೀರಾ ಕೆಳಗೆ ಹಾರುವ ವಾಹನ ಕಾಣಿಸಿತು. ಅವರು ಬರೆಯುತ್ತಾರೆ:

"ಅದು ನಮ್ಮ ಬಳಿ ಬರುತ್ತಿದ್ದ ವೇಗಕ್ಕೆ ಈ ಪ್ಲೇನ್ ಅಫಘಾತವಾಗಿ ಬೀಳುವುದು ಖಂಡಿತಾ ಎಂದು ನಾವು ಜೀಪಿನಿಂದ ಹೊರಗೆ ಹಾರಿ ಬಿದ್ದೆವು. ಆದರೆ ಅದು ಇದ್ದಕ್ಕಿದ್ದಂತೆ ಸುಮ್ಮನೆ ಗಾಳಿಯಲ್ಲಿ ನಿಂತೇ ಬಿಟ್ಟಿತು. ನಾವು ನಿಂತ ಜಾಗದಿಂದ ಅದು ಅಲುಗಾಡತ್ತಲೂ ಇರಲಿಲ್ಲ, ಎಂಜಿನ್ನಿನ ಚಿಕ್ಕ ಸದ್ದೂ ಇರಲಿಲ್ಲ...ಅರೆ, ಇದೆಂತಾ ವಿಮಾನ? ಅರೆರೆ,ಇದು ವಿಮಾನವೇ ಅಲ್ಲ ಎಂದೆಲ್ಲಾ ಗೊಂದಲವಾಯಿತು. ಅದು ಕೇವಲ ನೆಲದಿಂದ 100-200 ಅಡಿ ಎತ್ತರದಲ್ಲಿ ಖಾಲಿ ಆಗಸದಲ್ಲಿ ತೆಪ್ಪಗೆ ನಿಂತಿದೆ! ಆಗ ಮರುಕ್ಷಣವೆ ಅದು ವಿರುದ್ಧ ದಿಕ್ಕಿನಲ್ಲಿ 500' ಎತ್ತರಕ್ಕೆ ಗಕ್ಕನೆ ಏರಿತು. ಅಲ್ಲಿಗೆ ಹೋಗಿ ಮತ್ತೆ ನಿಂತಿತು. ಈಗ ನಮಗೆ ಸ್ಪಷ್ಟವಾಗಿ

ಈ ನೌಕೆ ಕಾಣಿಸಹತ್ತಿತ್ತು. ಅದರ ಹೊಟ್ಟೆಯ ಸುತ್ತಲೂ ಬೆಳಕು ಚಿಮ್ಮಿಸುವ ಒಂದು ಚೆಂಡು ಜೋರಾಗಿ ಸುತ್ತುತ್ತಿತ್ತು. ಹಾಗೆಯೇ ಆ ನೌಕೆ ಅಲ್ಲಿಂದ ಗಾಳಿಯಲ್ಲಿ ವಿಚಿತ್ರ ಬಗೆಯ ಸರ್ಕಸ್ ಚಲನೆಗಳನ್ನು ಮಾಡಿತು, ನಂಬಲೇ ಸಾಧ್ಯವಾಗಲಿಲ್ಲ. ನಮ್ಮ ಕಣ್ಣಿಗೆ ಎಲ್ಲಾದರೂ ದೋಷವಾಗಿದೆಯೋ ಎಂಬಂತೆ…"

" ನಾವು ಆಗ ವೈರ್ಲೆಸ್ಸಿನಲ್ಲಿ ಹತ್ತಿರದ ಟೆಹೋಮಾ ಕೌಂಟಿ ಶೆರೀಫರ ಆಫೀಸಿನವರ ಜತೆ ಮಾತಾಡಿದೆವು. ಈ ತರಹದ ವಾಹನವನ್ನು ತಕ್ಷಣ ರೆಡಾರ್ ಅಧಿಕಾರಿಗಳಿಂದ ಪರೀಕ್ಷಿಸಿ ನಮಗೆ ವರದಿ ಮಾಡಿ ಎಂದು..ಆದರೆ ಆ ರೆಡಾರ್ ಅಧಿಕಾರಿಗಳು ಅಂತಾ ವಾಹನ ಯಾವುದನ್ನೂ ನಿಮ್ಮ ಹತ್ತಿರ ನಾವು ಗುರುತು ಹಿಡಿಯಲಾಗಿಲ್ಲ ಎಂದುಬಿಟ್ಟರು.

"…ಇಲ್ಲಿ ಈ ನೌಕೆಯಿಂದ ಬಂದ ಒಂದು ಕೆಂಪನೆ ಲೈಟ್ ಕೋಲು ನಮ್ಮ ಸುತ್ತಲಿನ ಪ್ರದೇಶವೆಲ್ಲಾ ಓಡಾಡಿತು. ಅಫೀಸರ್ ಕಾರ್ಸನ್ ನಮ್ಮ ಜೀಪಿನ ಬೀಕನ್ ಕೆಂಪು ದೀಪವನ್ನು ಅದರತ್ತ ಬಿಟ್ಟಾಗ ಅದು ಚಕ್ಕನೆ ಪಕ್ಕಕ್ಕೆ ನಿರಾಯಾಸವಾಗಿ ಸರಿಯಿತು. ಮತ್ತೆ ತನ್ನ ಕೆಂಪು ದೀಪವನ್ನು ಆರೇಳು ಸಲ ನೆಲಕ್ಕೆ ಬಿಟ್ಟು ಎಲ್ಲಾ ನೋಡಿಕೊಂಡಿತು. ಅದು ನಮ್ಮ ನೆಲ-ಸಸ್ಯಗಳು ಎಲ್ಲವನ್ನೂ ಗಮನಿಸಿಕೊಳ್ಳುತ್ತಿದೆ ಎಂದೆನಿಸಿತು. ನಂತರ ಆ ನೌಕೆಯು ಪೂರ್ವದಿಕ್ಕಿನ ಆಗಸಕ್ಕೆ ಹೋಗಿ ಅಲ್ಲಿ ನಿಂತಿತು. ಆಗ ಅಂತದೇ ಎರಡನೇ ನೌಕೆಯೂ ಬಂದು ಅದರ ಪಕ್ಕ ಗಾಳಿಯಲ್ಲಿ ನಿಂತಿತು. ಮತ್ತೆ ಎರಡೂ ಕೆಂಪು ದೀಪಗಳನ್ನು ಬಿಟ್ಟು ನೆಲವನ್ನೆಲ್ಲಾ ಪುನಃ ನೋಡಿಕೊಂಡವು. ನಂತರ ಎರಡೂ ವಾಹನಗಳು ಪೂರ್ವ ದಿಗಂತದಲ್ಲಿ ಬಹಳ ವೇಗವಾಗಿ ಸಾಗಿ ಕಣ್ಮರೆಯಾದವು"

ಪೋಲಿಸರಿಬ್ಬರು ವಾಪಸ್ ತಮ್ಮ ಕಚೇರಿಗೆ ತೆರಳಿದಾಗ ಅಲ್ಲಿ ಇನ್ನಿಬ್ಬರು ಅಧಿಕಾರಿಗಳು- ಡೆಪ್ಯುಟಿ ಪ್ರೈ ಮತ್ತು ಮಾಂಟೆಗೋಮೆರಿಯನ್ನು ಸಂಧಿಸಿದರು.

"ಅವರೂ ಅದನ್ನೆಲ್ಲಾ ಕಂಡಿದ್ದು ನಮ್ಮ ಎರಡೂ ತಂಡದ ಕತೆ ಒಂದೇ ಬಗೆಯದಾಗಿತ್ತು!"

ಒಟ್ಟಿನಲ್ಲಿ ಸ್ಕಾಟ್ ಮತ್ತು ಕಾರ್ಸನ್ ಈ ನೌಕೆಯನ್ನು ಎರಡು ಗಂಟೆ ಕಾಲ ನೋಡಿದರಂತೆ. ಆ ವಸ್ತು ನಮಗೆ ತೀರಾ ಹತ್ತಿರ ಬಂದಾಗಲೆಲ್ಲ ನಮ್ಮ ರೇಡಿಯೋ ತರಂಗಗಳ ಸಿಗ್ನಲ್ ಬಂದ್ ಆಗುತ್ತಿದ್ದವು. ..ನಾವು ಮೊದಮೊದಲು ಭಯಪಟ್ಟರೂ ಧೈರ್ಯ ತಂದುಕೊಂಡು ಇದನ್ನೆಲ್ಲಾ ನೋಡೇಬಿಡೋಣ ಎಂದು ಕಾದು ನಿಂತಿದ್ದೆವು.. ಆ ನೌಕೆಯಲ್ಲಿದ್ದವರೂ ನಮ್ಮನ್ನು ನೋಡಿ ಬೇಕಂತಲೇ ಆಟವಾಡಿಸಿದರೋ ಎಂದೆನಿಸಿತು. ಆದರೆ ಉತ್ತರ ಸಿಗಲೇ ಇಲ್ಲ…"

ಇವರು ನಾಲ್ವರನ್ನೂ ನಂತರ ಏರ್ ಫೋರ್ಸ್ ಇಂಟೆಲಿಜೆನ್ಸಿನವರು ವಿಚಾರಿಸಿ, "ಇವರೆಲ್ಲೋ ಮಾರ್ಸ್ ಗ್ರಹದ ಪ್ರತಿಬಿಂಬ ಮತ್ತೆರಡು ಹತ್ತಿರದ ತಾರೆಗಳ ರಿಫ್ರ್ಯಾಕ್ಶನ್ ಕಂಡಿದ್ದಾರೆ,. ನಮ್ಮ ರೆಡಾರಿನಲ್ಲಿ ಕಾಣದಿದ್ದರಿಂದ ಅಂತಾ ಹೊರಗಿನ ನೌಕೆಯೇ ಇರಲಿಲ್ಲ " ಎಂದು ಕೇಸು ಮುಚ್ಚಿಬಿಟ್ಟರು.

ಆಗ NICAP ನವರು ಇದನ್ನು ಮರುವಿಚಾರಣೆ ಮಾಡಿ ತಜ್ಞ ಅಂತರಿಕ್ಷ ವೀಕ್ಷಕರಿಂದ ಪತ್ತೆ ಹಚ್ಚಿಸಿದಾಗ, ಆ ಸಮಯದಲ್ಲಿ ಮಾರ್ಸ್( ಮಂಗಳ) ಗ್ರಹ ಮತ್ತು ಅದರ 2 ನಕ್ಷತ್ರಗಳು ಎಲ್ಲಾ ನಮ್ಮ ದಿಗಂತದ ಕೆಳಗೆ ಇದ್ದವೆಂದೂ, ಹಾಗಾಗಿ ಈ ರೀತಿಯ ದೀಪದ ರಿಫ್ರ್ಯಾಕ್ಷನ್ ಮುಂತಾದವೆಲ್ಲಾ ಈ ಕೇಸಿನಲ್ಲಿ ಸಾಧ್ಯವಿಲ್ಲವೆಂದೂ, ಆ ಪೋಲಿಸ್ ಅಧಿಕಾರಿಗಳು ವರದಿ ಮಾಡಿದ್ದು ಸುಳ್ಳಲ್ಲ, ಸತ್ಯವಾದದ್ದು ಎಂದು ಇನ್ನೂ ಒಬ್ಬರು ಬಾಹ್ಯಾಕಾಶ ವಿಜ್ಞಾನಿ ಸೇರಿದಂತೆ ಇವರೆಲ್ಲಾ ಅಭಿಪ್ರಾಯಪಟ್ಟರು. ಹೀಗಾಗಿ ಇಂತಾ ಘಟನೆಗಳ ನಂತರ NICAP ಇಂತಾ ಘಟನೆಗಳನ್ನು ಇನ್ನೂ ಗಂಭೀರವಾಗಿ ಪರಿಗಣಿಸಿ ಎಲ್ಲಾ ಸರಕಾರಿ ದಾಖಲೆ ಮತ್ತು ಅಧಿಕಾರಿಗಳನ್ನು ವಿಚಾರಿಸುವ ಹಕ್ಕು ಪಡೆದು ಮುಂದುವರೆಯಿತಂತೆ.

ಈ ಸಂಸ್ಥೆಯನ್ನು 1980 ರ ನಂತರ ಅಧಿಕಾರದ ದುರುಪಯೋಗ, ಸದಸ್ಯರಿಲ್ಲ ಎಂಬ ಕಾರಣ ಕೊಟ್ಟು ಮುಚ್ಚಲಾಯಿತಂತೆ. ಇವರ ದಾಖಲೆಗಳನ್ನೆಲ್ಲಾ CUFOS ಸಂಸ್ಥೆಗೆ ವರ್ಗಾಯಿಸಲಾಯಿತು.

ಇದಲ್ಲದೇ ಇದೇ ವರದಿಯಲ್ಲಿ ಹೊನೊಲುಲು ಸ್ವೀಡನ್ ಮುಂತಾದ ಕಡೆಯೂ ದೈತ್ಯಾಕಾರ, ಚಿಕ್ಕ ದೊಡ್ಡ ಮಿನುಗುವ ಹಲವು ನೌಕೆಗಳ ಹಾರಾಟವನ್ನು ನೂರಾರು ಜನ ನೋಡಿದ್ದಾರೆ.

ಎರಡನೇ ಮಹಾಯುದ್ಧದ ಕಾಲದಲ್ಲೇ ಗೋಲಾಕಾರವಲ್ಲದೇ ತ್ರಿಕೋನಾಕಾರ, ಚೌಕ ಮತ್ತು ಇನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಿಗಾರ್ ಆಕಾರದ ಉದ್ದುದ್ದ ನೌಕೆಗಳು ಬಂದು ಧುತ್ತೆಂದು ಆಗಸದಲ್ಲಿ ನಿಲ್ಲುವುದೂ ಅದರಿಂದ ಚಿಕ್ಕ ಚಿಟ್ಟೆಗಳಂತೆ ಕೆಲವು ನೌಕೆಗಳು ಹೋಗಿ ಬರುವುದು ಕಂಡು ಈ ಸಿಗಾರ್ ಆಕಾರದ ನೌಕೆ ಮದರ್ ಶಿಪ್- "ಮಾತೃ ನೌಕೆ" ಆಗಿರಬಹುದೆಂದು ಅವರೆಲ್ಲ ಅಭಿಪ್ರಾಯ ಪಟ್ಟರಂತೆ.




ಒಮ್ಮೆಯಂತೂ 2016 ರಲ್ಲಿ UFOlogists ಹೇಳುವ ಪ್ರಕಾರ ನಾಸಾ ದವರ ಬಾಹ್ಯಾಕಾಶದ ISS ಸ್ಪೇಸ್ ಸ್ಟೇಷನ್ನಿನ ಸಮೀಪ ಇಂತಾ ಸಿಗಾರ್ ಆಕಾರದ ಯಾವುದೋ ಅನ್ಯಗ್ರಹ ವಾಹನವೊಂದು ಪಕ್ಕದಲ್ಲಿ ಭಯಂಕರ ವೇಗದಲ್ಲಿ ಪಾಸ್ ಆಗಿದೆ..ಆಗ ಮರುಕ್ಷಣವೇ ವಿಡಿಯೋ ಫೀಡ್ ಕಟ್ ಮಾಡಿ ಅದು ಹೋದ ನಂತರ ನಾಸಾದವರು " ಇಲ್ಲಿ ವಿಡಿಯೋಗೆ ಟೆಕ್ನಿಕಲ್ ತೊಂದರೆಯಾಯಿತು, ಕ್ಷಮಿಸಿ" ಎಂದೇಳಿ ಪ್ರಸಾರವನ್ನು ಮತ್ತೆ ಆರಂಭಿಸಿದ್ದಾರೆ. ಅದರ ಒಂದು ಚಿತ್ರ ಹೀಗಿದೆ. ಇದು ನಾಸಾ 'ಸದಾ ಮಾಡುವ ತಡೆಗೋಡೆ ತಂತ್ರ, ಯಾವುದನ್ನೂ ಒಪ್ಪದೇ ಅಲ್ಲಗೆಳೆಯುವುದು ' ಎಂಬ ವಿವಾದವಿದೆ. ಇದನ್ನು ಬ್ರಿಟನ್ನಿನ ಪ್ರತಿಷ್ಟಿತ ಡೈಲಿ ಮೈಲ್ ಪತ್ರಿಕೆಯೇ ಪ್ರಕಟಿಸಿದೆ.

ಆ ವಸ್ತು ವಿಡಿಯೋದಲ್ಲಿ ಅಂದಾಜಿಗೆ ನೂರಾರು ಮೀಟರ್ ಉದ್ದವಿದ್ದು ಸಿಲಿಂಡರಿನಂತೆ ನುಣುಪಾದ ಪರಿಧಿಯಿದೆ. ಯಾವ ಉಲ್ಕೆ, ಕ್ಷುದ್ರಗ್ರಹವೂ ಸಹಜವಾಗಿ ಹಾಗಿರಲಾಗದು ಎಂದು ಹೇಳಲಾಗುತ್ತದೆ.



ಕೊನೆಯ ಮಾತು:

ಹೀಗೆ ವಿಮಾನದಳದವರೂ, ಪೈಲೆಟ್ ಗಳು, ಪೋಲೀಸರು, ಸೇನಾಧಿಕಾರಿಗಳು ವರದಿ ಮಾಡಿದ ನೂರಾರು ಘಟನೆಗಳನ್ನು ನಾನೂ ಇಲ್ಲಿ ವರದಿ ಮಾಡುತ್ತಲೇ ಹೋಗಬಹುದು. ಆದರೆ ಹೆಚ್ಚಿನ ಪ್ರಯೋಜನವೇನೂ ಆಗದು. ಏಕೆಂದರೆ ಎಲ್ಲಾ ಆ ವರದಿಗಳಲ್ಲೂ, ಸಾಮಾನ್ಯವಾಗಿ ಕಂಡುಬರುವುದು:

1. **ಆ ಜನರು ಸತ್ಯ ಹೇಳಿದ್ದಾರೆ, ಮತ್ತು**
2. **ಅವರು ಕಂಡರಿಯದ, ವಿಜ್ಞಾನದಲ್ಲಿ ಆ ಸಮಯದಲ್ಲಿ ಸಾಧ್ಯವಾಗದ ಹಾರುವ ವಾಹನಗಳ ವಿಚಿತ್ರ ನಡೆವಳಿಕೆ ಮತ್ತು ಅವು ಅದೃಶ್ಯವಾಗುವುದೇ "common factor" ಆಗಿರುತ್ತದೆ...**

ಕೊನೆಗೆ ಸಮಯ ಸಿಕ್ಕರೆ ಇತ್ತೀಚೆಗೆ **2017** ರಲ್ಲಿ ಒಂದು ವಿಮಾನದ ಕಿಟಕಿಯಿಂದ ಪ್ರಯಾಣಿಕರೊಬ್ಬರು ತೆಗೆದ ವಿಡಿಯೋದಲ್ಲಿ ಒಂದು **UFO** ನೋಡಿರಿ...ಸಾಮಾನ್ಯ ಪ್ರಯಾಣಿಕರಿಗೆಲ್ಲಾ ಮನಸ್ಸಿನಲ್ಲಿ ಯಾವುದೇ ದುರುದ್ದೇಶವಾಗಲೀ, ಅಥವಾ ವಿಡಿಯೋ-ಮೋಸವನ್ನು ಮಾಡುವುದಕ್ಕಾಗಲೀ ಅವಕಾಶವಿರಲಿಲ್ಲ ಎಂಬ ನಂಬಿಕೆಯ ಮೇಲೆ...
https://www.youtube.com/watch?v=OLR_m0nAxmQ

ಇನ್ನು ವಿಮಾನದಳದವರ, ಸೇನೆಯವರ, ಪೋಲಿಸರ ವರದಿಗಳು ಸಾಕು, ನಮ್ಮ ನಿಮ್ಮಂತಾ ಸಾಮಾನ್ಯ ಜನರು ಕಂಡ ಅನುಭವಿಸಿದ ಹಾರುವ ತಟ್ಟೆಯ, ಗಗನ ನೌಕೆಗಳ ವಿಚಿತ್ರ ಕೇಸುಗಳನ್ನೂ ಪರಿಶೀಲಿಸೋಣ...

## ***ಕ್ಲೋಸ್ ಎನ್ಕೌಂಟರ್ಸ್ -ಮೂರು ಬಗೆಯದೇನೇನು?***

ಅನ್ಯಗ್ರಹ ಜೀವಿಗಳ ಬಗ್ಗೆ ಹಾಲಿವುಡ್ ಇಂಗ್ಲೀಶ್ ಚಿತ್ರಗಳನ್ನು ನೋಡುವವರಿಗೆ "ಕ್ಲೋಸ್ ಎನ್ಕೌಂಟರ್ಸ್ ಆಫ್ ದ್ ಥರ್ಡ್ ಕೈಂಡ್"(1977) ಎಂಬ ಜನಪ್ರಿಯ ಚಿತ್ರ ತಿಳಿದಿರುತ್ತದೆ. ಬಹಳ ಅದ್ಭುತವಾದ ಚಿತ್ರ, ನೋಡಿಲ್ಲದವರು ನೋಡಿ.




ಈ ಮೂರು ಬಗೆಯ "ಸಮೀಪದ ಭೇಟಿ" ಎಂದರೇನು? ಅಲೆನ್ ಜೆ ಹೈನೆಕ್ ಎಂಬ ಜಗದ್ವಿಖ್ಯಾತ ಬಾಹ್ಯಾಕಾಶ ಗಗನಯಾತ್ರಿ ಮತ್ತು UFO ಸಂಶೋಧಕ ಹೀಗೆ ಹೇಳುತ್ತಾನೆ:

1. ಫಸ್ಟ್ ಕೈಂಡ್ ( ಮೊದಲ ಬಗೆ):
   ಯಾವುದೇ ಹಾರುವ ತಟ್ಟೆ ಇತ್ಯಾದಿ ಅನ್ಯಗ್ರಹ ವಾಹನವನ್ನು 500 ಅಡಿ ಒಳಗಡೆ ದೂರದಲ್ಲಿ ನೋಡಿದ್ದರೆ, (ಸ್ವಲ್ಪ ಮಟ್ಟಿಗೆ ದೈಹಿಕ ತೊಂದರೆ ಇದೆ ಅಥವಾ ಇಲ್ಲದೇ) ಅದರ ಆಕಾರವನ್ನು ಸರಿಯಾಗಿ ನಂತರ ವಿವರಿಸಬಲ್ಲೆರಾದರೆ...
2. ಸೆಕೆಂಡ್ ಕೈಂಡ್ (ಎರಡನೇ ಬಗೆ): ಆ ಭೇಟಿಯಿಂದ ನೋಡುಗರ ವಾಹನಗಳ ಚಲನೆ ನಿಂತರೆ, ಕೆಟ್ಟರೆ, ಪ್ರಾಣಿಗಳು ಭಯಭೀತರಾದರೆ, ಬಹಳ ದೈಹಿಕ ತೊಂದರೆ- ನೋವು, ಮೂರ್ಛೆ, ಗಾಯಗಳು ಅಥವಾ ಹೃದಯಾಘಾತ, ರೇಡಿಯೋ/ಅಣುವಿಕಿರಣ ಪ್ರಭಾವ ಇತ್ಯಾದಿ ಆದರೆ...

3. ಥರ್ಡ್ ಕೈಂಡ್ (ಮೂರನೇ ಬಗೆ): ಜೀವಂತ ಅನ್ಯಗ್ರಹ ಜೀವಿಗಳ ಜತೆ ಮುಖಾಮುಖಿ ಭೇಟಿಯಾದರೆ, ಅವನ್ನು ಸ್ಪರ್ಶಿಸಿ/ ಮಾತನಾಡಿಸಿದರೆ, ಅವು ಮಾನವರೂಪಿಯೋ( ಹ್ಯುಮನಾಯ್ಡ್) ಅಥವಾ ಯಂತ್ರಮಾನವನೋ( ರೋಬೋ) ಆಗಿದ್ದರೆ...

ಮೊದಲು **ಫಸ್ಟ್ ಕೈಂಡ್** ಕೇಸುಗಳನ್ನು ನೊಡೋಣ, ಬನ್ನಿ....



1. ಸ್ಪಾನಿಶ್ ಕೆನರಿ ದ್ವೀಪದಲ್ಲಿ ಗಗನದಲ್ಲಿ ಇಂತಾ ಪ್ರಕಾಶಮಯ ವಸ್ತುವನ್ನು ನೂರಾರು ಜನ ಕಂಡು ಭಾರೀ ವರದಿಯಾಗಿತ್ತು. ಟ್ಯಾಕ್ಸಿ ಡ್ರೈವರ್ಸ್, ತಜ್ಞ ಡಾಕ್ಟರ್, ಒಬ್ಬ ವೃದ್ಧ ಹೀಗೆ ಹಲವಾರು ಮಂದಿ ಅದನ್ನು ಬೇರೆ ಬೇರೆ ಬಣ್ಣ, ವೇಗ್ ಮತ್ತು ಸ್ಥಳಗಳಲ್ಲಿ ಆ ದ್ವೀಪದಲ್ಲಿ ನೋಡಿ ಪತ್ರಿಕೆಗಳಲ್ಲೂ ವರದಿಯಾಗಿತ್ತು. ಇದನ್ನು ಬಹುಕಾಲ ವಿಚಾರಣೆ ಮಾಡಿದ ಪತ್ತೇದಾರ ಅಡ್ಜಟೆಂಟ್ "ಎಲ್ಲಾ ನೋಡಿ ಅರಿತ ಬಳಿಕ ಯಾವುದೋ ತಿಳಿಯದ ಶತ್ರುಗ್ರಹದ ನೌಕೆ ನಮ್ಮ ದ್ವೀಪದ ಜನರ ಕಣ್ಣಿಗೆ ಬಿದ್ದಿರುವುದು ನಿಜ. ಘಟನೆಯೇ ಸುಳ್ಳಲ್ಲ..ಆದರೆ ಎಲ್ಲಿಯದು, ಏಕೆ ಬಂತು, ಎಲ್ಲಿಗೆ ಹೋಯಿತು ಎಂಬುದೇ ನಮಗೆ ರಹಸ್ಯ"ಎಂದು ತೀರ್ಪು ಕೊಟ್ಟರು.



2. 1957ರಲ್ಲಿ ಟೆಕ್ಸಾಸ್, ಅಮೆರಿಕಾದಲ್ಲಿ ಲುಬ್ಬಾಕ್ ಎಂಬ ಸ್ಥಳದಲ್ಲಿ ಮೂರು ಜನ ಟೆಕ್ಸಾಸ್ ಟೆಕ್ ಕಾಲೇಜಿನ ಪ್ರೊಫೆಸರುಗಳು ರಾತ್ರಿ ನಡೆದುಕೊಂಡು ಹೋಗುತ್ತಿದ್ದಾಗ ಆಕಾಶದಲ್ಲಿ ಅರ್ಧ ಚಂದ್ರಾಕೃತಿಯಲ್ಲಿ ಹೊಳೆಯುವ ಪ್ರಕಾಶಮಾನ ಬೆಳಕುಗಳು ಸುಯ್ಯನೆ ಹಾರಿಹೋಗುತ್ತಿದ್ದುದು ಕಂಡು ಇವು ವಿಮಾನಗಳಲ್ಲ ಎಂದು ತೀರ್ಮಾನಿಸಿದರಂತೆ.

   ಹಾಗೇ ಮುಂದಿನ ದಿನಗಳಲ್ಲಿ ಡಜನ್ ಗಟ್ಟಲೆ ಇಂತಾ ವರದಿಗಳು ಆ ನಗರದಲ್ಲಿ ಬರಲಾರಂಭಿಸಿದವು. ಅವರಲ್ಲಿ ಕಾರ್ಲ್ ಹಾರ್ಟ್ ಜೂನಿಯರ್ ಎಂಬ 19 ವರ್ಷದ ವಿದ್ಯಾರ್ಥಿ ಸೆರೆ ಹಿಡಿದ ಚಿತ್ರಗಳನ್ನು ಅಲ್ಲಿನ ದಿನಪತ್ರಿಕೆಗಳೇ ಅಲ್ಲದೇ ಲೈಫ್ ಎಂಬ ಜನಪ್ರಿಯ ಪತ್ರಿಕೆಯೂ ಪ್ರಕಟಿಸಿತು. ಆದರೆ ಪ್ರಾಜೆಕ್ಟ್ ಬ್ಲೂ ಬುಕ್ ಎಂಬ ಸರಕಾರಿ ಸಂಸ್ಥೆಯೂ ಇದನ್ನು ಪರೀಕ್ಷಿಸಿ ಅವಸರವಸರವಾಗಿ ಇವು ಕೆಲವು ಹಕ್ಕಿಗಳು ಬೆಳಕನ್ನು ಪ್ರತಿಫಲನ ಮಾಡಿದ್ದವು ಅಷ್ಟೇ ಎಂದು ಕೇಸು ಮುಚ್ಚಿದರಂತೆ. ಆದರೆ ಸಾರ್ವಜನಿಕರ್ಯಾರೂ ಇದನ್ನು ಒಪ್ಪಲೇ ಇಲ್ಲ, ಅವು ಹಕ್ಕಿಗಳಲ್ಲವೇ ಅಲ್ಲ, ಬೆಳಕು ಚಿಮ್ಮಿಸುವ ವಾಹನಗಳು ಶರವೇಗದಲ್ಲಿ ಆಗಸವನ್ನು ಕ್ರಾಸ್ ಮಾಡುತ್ತಿದ್ದವು, ಹಕ್ಕಿಗಳು ಮಾಡಲು ಸಾಧ್ಯವೆ? ಎಂದು ವಾದಿಸಿದರಂತೆ. ಅಷ್ಟೇ, ಅಲ್ಲಿಗೆ ಮುಗಿಯಿತು!

3. ಅದೇ 1957 ರಲ್ಲಿ ಲೆವೆಲ್ಲಾಂಡ್, ಟೆಕ್ಸಾಸಿನಲ್ಲಿ ಡಜನ್ ಗಟ್ಟಲೆ ನಾಗರೀಕರು ಯವುದೋ ಹೊಸಬಗೆಯ ರಾಕೆಟ್ ತರಹದ ವಾಹನ ಬಹಳ ವೇಗದಲ್ಲಿ ಆಗಸದಲ್ಲಿ ಹತ್ತಿರವೇ ಸಾಗುತ್ತದೆ, ಆಗೆಲ್ಲಾ ನಮ್ಮ ವಾಹನಗಳು ಚಕ್ಕನೆ ನಿಂತುಹೋಗುತ್ತವೆ...ಈ ರಾಕೆಟ್ಟುಗಳಿಂದ ವಾಹನಗಳು ಎಲ್ಲೆಂದರಲ್ಲಿ ನಿಲ್ಲುತ್ತವೆ. ಹೆಡ್ ಲೈಟ್ಸ್ ತಾನಾಗೇ ಆರಿ ಹೊಗುತ್ತವೆ, ಆಮೇಲೆ ಅವು ಹೋದಮೇಲೆ ಎಲ್ಲಾ ಸರಿಯಾಗುತ್ತದೆ. ಇವನ್ನು ದಯವಿಟ್ಟು ನಿಲ್ಲಿಸಿ ಎಂದು ದೂರು ಕೊಟ್ಟಾಗ ಪೋಲಿಸರೂ ತಮಗೆ ಅದೇ ಅನುಭವವಾದ ಮೇಲೆ ಸರಿ ಎಂದು ನಂಬಿ "ಪ್ರೊಜೆಕ್ಟ್ ಬ್ಲೂ ಬುಕ್" ಸಂಸ್ಥೆಗೆ ಹೇಳಿದರು. ಅವರ ತೀರ್ಪು? "ಯಾವುದೋ ಒಂತರಾ" ಎಲೆಕ್ಟ್ರಿಕಲ್ ಚಂಡಮಾರುತ ಆಗಾಗ ಬಂದಾಗ ವಾಹನಗಳು ನಿಲ್ಲುತ್ತವೆ, ನಮ್ಮ ಕಡೆಯಿಂದ ರಾಕೆಟ್ ಇತ್ಯಾದಿ ಇಲ್ಯಾವುದೂ ಹಾರಿಲ್ಲ ಎಂದುಬಿಟ್ಟರಂತೆ... ಆದರೆ ಅಲ್ಲಿಯ ಹವಾಮಾನ ಇಲಾಖೆ ಆ ದಿನಗಳಲ್ಲಿ ಅಲ್ಲಿ ಯಾವುದೇ ರೀತಿಯ ಚಂಡಮಾರುತ ಬರಲೇ ಇಲ್ಲ ಎಂದು ವಾದಿಸಿದರಂತೆ...ಈ ಕೇಸೂ ಹಾಗೇ ಮರೆಯಾಯಿತು.

4. ಟೆಹರಾನ್, ಇರಾನ್, 1976 ರಲ್ಲಿ ಏಷ್ಯಾದಲ್ಲಾದ ಕೇಸ್ :- ಸೆಪ್ಟೆಂಬರ್ 19, 1976 ರಂದು ಹಲವಾರು ನಾಗರೀಕರ ಫೋನ್ ಕಾಲ್ಸ್ ಬಂದವು, ಅದೇ ಆಗಸದಲ್ಲಿ ಹೊಸ ಬೆಳಕು ಚಿಮ್ಮುವ ವಾಹನ ಹಾರುತ್ತಿದೆ. ಆಗ ವಿಮಾನದಳದವರು ಅದನ್ನು ಶತ್ರು ಎಂದು ಪರಿಗಣಿಸಿ F4 fighter jet ವಿಮಾನವನ್ನು ಕಳಿಸಿಕೊಟ್ಟರಂತೆ. ಇರಾನ್-ಇರಾಕ್ ಯುದ್ಧ ಗೊತ್ತಲ್ಲ, ಅವರು ಯಾವ

ಆಕಾಶದ ದಾಳಿಗೂ ಯಾವಾಗಲೂ ಸಿದ್ಧ. ಆ ವಿಮಾನವು ಆ ಹೊಸ ಬಗೆಯ ಬೆಳಕು ಚಿಮ್ಮುವ ನೌಕೆಯನ್ನು ಅಟ್ಟಿಸಿಕೊಂಡು ಹೋಗಿ ಅದಕ್ಕೆ ರೆಡಾರ್ ಲಾಕ್ ಮಾಡಿತಂತೆ. ಆಗ ತಕ್ಷಣವೇ ಆ ಗಗನನೌಕೆ ಹೊಳೆಯುವ ಬೆಳಕಿನ ಕೋಲನ್ನು ಈ ವಿಮಾನದತ್ತ ಕಳಿಸಿತಂತೆ. ಅದು ಇದಕ್ಕೆ ಬಡಿದ ತಕ್ಷಣ F4 ವಿಮಾನದ ಪ್ಯಾನೆಲ್ಲಿನಲ್ಲಿದ್ದ ಎಲ್ಲಾ ವಿದ್ಯುತ ಉಪಕರಣ, ಬಾಂಬ್ ರಿಲೀಸ್ ಗೇರ್ ಚಕ್ಕನೆ ನಿಂತುಹೋಯಿತಂತೆ..ಆಫ್ ಆದದ್ದು ಮತ್ತೆ ಶುರುಮಾಡಲೂ ಪೈಲೆಟ್ಟಿಗೆ ಆಗುತ್ತಿಲ್ಲ...ಆ ಗಗನನೌಕೆ ಮತ್ತಿನ್ನೊಂದು ಲೈಟ್ ಕೋಲನ್ನು ಭೂಮಿಯತ್ತ ಚೆಲ್ಲಿ ಸರ್ರನೆ ಹಾರಿ ಮಾಯವಾಯಿತಂತೆ, ಕೊನೆಗೂ ಅದು ಪೈಲೆಟ್ಟಿಗೆ ತನಗೆ ಹಾನಿ ಮಾಡಲು ಅವಕಾಶವೇ ಕೊಡಲಿಲ್ಲ. ಆ ಪೈಲೆಟ್ ಹೇಗೂ ಎಮರ್ಜೆನ್ಸಿ ಲ್ಯಾಂಡಿಂಗ್ ಮಾಡಿ ನಿಲ್ದಾಣಕ್ಕೆ ವಾಪಸ್ ಆದನಂತೆ. ಆದರೆ ಈ ಕೇಸನ್ನು ಪತ್ತೆ ಮಾಡಲು ಮುಂದೆ ಅಮೆರಿಕ ಏರ್ ಫೋರ್ಸ್ ಹಲವು ಬಾರಿ ಎಳೆದಾಡಿ ಇದು ವಿಮಾನದ ಎಂಜಿನ್ ವೈಫಲ್ಯ+ ಅದು ಮಿಂಚಿನ ತರಹ ನೈಸರ್ಗಿಕ ಘಟನೆ, ಅದಲ್ಲದೇ ಬೆಳಕುಗಳು- ಅಂದು ಮೀಟಿಯಾರ್ ಶವರ್ ಆಗಿದೆ ( ಉಲ್ಕೆಗಳ ಮಳೆ) ಎಂದು ಹೇಳಿಕೆ ಕೊಟ್ಟು ಮತ್ತೆ ವಿಚಾರಣೆ ಮಾಡದೇ ಮುಚ್ಚಿಹಾಕಿದರು.

5. ಬೆಲ್ಜಿಯನ್ ವೇವ್ 1989 ನವೆಂಬರ್ ಅಂತ್ಯ: ಒಂದು ತ್ರಿಕೋನಾಕಾರದ ವಾಹನ ಆಗಸದಲ್ಲಿ ಬಂದು ಬಂದು ನಿಲ್ಲುತ್ತಿದೆ ಎಂದು ಹಲವರು ಬೆಲ್ಜಿಯನ್ ನಾಗರೀಕರು ವರದಿ ಮಾಡಿದರು. ಈ ಚಿತ್ರಗಳನ್ನೂ ಜನ ತೆಗೆದುಕೊಂಡರು.





ಸರಕಾರದವರು ಕೆಲವರು ಈ ಚಿತ್ರಗಳ ಬಗ್ಗೆಯೂ ವಿವಾದ ತೆಗೆದರು, ಇದೆಲ್ಲಾ ರೀ ಕನ್ಸ್ಟ್ರಕ್ಷನ್ ವಿಡಿಯೋ, ನಿಜವಾದ್ದಲ್ಲ ಎಂದೆಲ್ಲಾ...ಇರಲಿ, ಸದ್ಯಕ್ಕೆ ನೋಡುವಾ ಏನಾಯಿತೆಂದು.

1990 ರಲ್ಲಿ ಬೆಲ್ಜಿಯಮ್ಮಿನ ಮಿಲಿಟರಿ ರೆಡಾರ್ ಸ್ಟೇಶನ್ನಿನಲ್ಲಿ ಎರಡು ಅನಾಮಧೇಯ ವಾಹನಗಳನ್ನು ಆಗಸದಲ್ಲಿ ಕಂಡ ನಂತರ ಅದನ್ನು ಹಿಡಿಯಲು/ ಉರುಳಿಸಲು ಎರಡು F16 jet ವಿಮಾನಗಳನ್ನು ಕಳಿಸಿಕೊಟ್ಟರಂತೆ.ಆ ವಿಮಾನಗಳು ರೆಡಾರಿನಿಂದ ಹೇಗೋ ಆ ನೌಕೆಗಳನ್ನು ಲಾಕ್ ಆನ್ ಮಾಡಿದವಂತೆ. ಆದರೂ ಆ ಹಾರುವ ನೌಕೆಗಳು ಎಷ್ಟು ಬೇಗ ಹಾರಿದವೆಂದರೆ ರೆಡಾರ್ ವ್ಯಾಪ್ತಿಯಿಂದ ಅರೆಕ್ಷಣದಲ್ಲಿ ಮಾಯವಾದವಂತೆ... ಈ ಬಗೆಯ ಗಗನನೌಕೆಗಳನ್ನು ಬೆಲ್ಜಿಯುಮ್ಮಿನಲ್ಲಿ 13,500 ಜನ ನೋಡಿದ್ದರೆಂದು ಲೆಕ್ಕ ಹಾಕಿದ್ದಾರೆ. ಇದು ಅತಿ ದೊಡ್ಡ ಘಟನೆಯಾಯಿತು ಬೆಲ್ಜಯನ್ ಏರ್ಫೋರ್ಸ್ ನಮಗೆ ಇದು ಅರ್ಥವಾಗಲಿಲ್ಲ ಎಂದು ಸಾರ್ವಜನಿಕವಾಗಿ ಒಪ್ಪಿಕೊಂಡು ಬ್ರಿಟನ್ನಿನ ರಾಯಲ್ ಏರ್ ಫೋರ್ಸಿಗೆ ಕಳಿಸಿತು.. ಅವರೂ ಸಹಾ ಯಾರೂ ನಮ್ಮ ಮೇಲೆ ದಾಳಿ ಮಾಡಿ, ಹಾನಿ ಮಾಡಲಿಲ್ಲವಲ್ಲ ಬಿಡಿ ಎಂದು ಕೇಸು ಕೈಬಿಟ್ಟರು.

6. ಫ್ರಾನ್ಸಿನ ವ್ಯಾಲೆನ್ಸೋಲ್ ಎಂಬ ಊರಿನಲ್ಲಿ ಮಾರೀಸ್ ಮಾಸೆ ಎಂಬ ರೈತನು ಜುಲೈ 1, 1965 ರಂದು ಬೆಳಿಗ್ಗೆ 6 ಕ್ಕೆ ತನ್ನ ಲ್ಯಾವೆಂಡರ್ ಗಿಡದ ಗದ್ದೆಗೆ ಬಂದನು...ಅವನು ಸಿಗರೇಟ್ ಹಚ್ಚಿ ನಿಂತಾಗ, ಅಲ್ಲೇ 90 ಮೀ ದೂರದಲ್ಲಿ ಹಿಸ್ಸಿಂಗ್ ಅಂದರೆ ಬುಸ್ಸೆನ್ನುವ ಸದ್ದು ಕೇಳಿ ಅತ್ತ ನೋಡಿದರೆ ಗದ್ದೆಯಲ್ಲೊಂದು ಡಾಫೀನ್ ಆಟೋಮೊಬೈಲ್ ತರಹದ ವಾಹನ ನಿಂತಿದೆ.ಆದರೆ ಅದಕ್ಕೆ 6 ಚಕ್ರವಿದೆ ಮಧ್ಯೆ ಒಂದು ಆಧಾರ ಕಂಬವಿದೆ "ಓಹೋ ನನ್ನ ಲ್ಯಾವೆಂಡರ್ ಕದಿಯಲು ಬಂದ ಕಳ್ಳ"ರನ್ನು ಮೆತ್ತಗೆ ಹೋಗಿ ಹಿಡಿಯೋಣವೆಂದು ಅವನು ಮೆತ್ತಗೆ ಅದರ 10 ಮೀ ಹತ್ತಿರಕ್ಕೆ ತಲುಪಲು, ಅದರ ಬಳಿ ನಿಂತಿದ್ದ ಎರಡು ಜೀವಿಗಳು ಇವನನ್ನು ನೋಡಿ ಕೈಯಲ್ಲಿದ್ದ ಚೀಲದಿಂದ ಒಂದು ಟ್ಯೂಬನ್ನು ಇವನತ್ತ ತಿರುಗಿಸಿದಾಗ, ಮಾರೀಸಿಗೆ ಶಾಕ್ ಆಗಿ ಅಲ್ಲೇ ಕೈ ಕಾಲು ಅಡಗಿ ನಿಲ್ಲುವಂತಾಯಿತು. ಅವನು ಎಲ್ಲವನ್ನೂ ನೋಡುತ್ತಿದ್ದನಾದರೂ ಶಿಲೆಯಂತೆ ನಿಂತಿರಲು ಮಾತ್ರ ಸಾಧ್ಯವಾಯಿತು, ಕೈ ಕಾಲು ಆಡುತ್ತಿಲ್ಲ. ಅವನಿಗೆ ಅವರು ತನ್ನತ್ತ ಏನೋ ಲೈಟ್ ಬೀಮ್ ಬಿಟ್ಟರೆಂದು ಗೊತ್ತಾಗಿದೆ, ಆದರೂ!... ಆ ಎರಡೂ ಜೀವಿಗಳು ತಮ್ಮ ನೌಕೆಯೊಳಕ್ಕೆ ಮತ್ತೆ ಸರ್ರನೆ ಸೇರಿದ್ದು ಕಾಣಿಸಿದೆ. ಅದರ ಮಧ್ಯೆ ಜೋರಾದ ಸುಯ್ ಎನ್ನುವ ಸದ್ದು ಬಂದು ನೆಲ ನಡುಗಿತು. ಆ ನೌಕೆಗೆ ಒಂದು ಡೋಮ್ ತರಹದ ತಲೆಯೂ ಇದೆ..ಆ ಆರೂ ಕಾಲುಗಳು ರವ್ವನೆ ತಿರುಗಿ ಕಂಬದ ಸಮೇತ ಒಳಗೆ ಸೇರಿ ವೇಗವಾಗಿ ಆಕಾಶದಲ್ಲಿ ಹಾರಿ ಮರೆಯಾಯಿತು. ಮಾರೀಸ್ ಇದೇ ರೀತಿ 15 ನಿಮಿಷ ಕಲ್ಲಿನಂತೆ ಅಲ್ಲೇ ನಿಂತಿದ್ದು ಆಮೇಲೆ ಚಲನವಲನ ಬಂದಾಗ ಊರಿಗೆ ಹಿಂತಿರುಗಿ ಪೋಲಿಸರಿಗೆ ಈ ವಿಷಯ ದೂರು ಕೊಟ್ಟನು. ಪೋಲೀಸರು ಬಂದು ನೋಡಿದಾಗ ಅಲ್ಲಿ ಆ ಗದ್ದೆಯಲ್ಲಿ ವಾಹನ ನಿಂತಿದ್ದ ಜಾಗದಲ್ಲಿ 18 ಸೆ ಮೀ ವ್ಯಾಸ,40 ಸೆಮಿ ಉದ್ದದ ಕಂಬ ನೆಟ್ಟ ಹಳ್ಳ, ಸುತ್ತಲೂ 6 ಸೆಮೀ ಆಳದ ಚಿಕ್ಕ ಹಳ್ಳಗಳೂ ಇದ್ದವು. ಆ ವಾಹನ ಹಾರಿದ ಸ್ಥಳದ 100 ಮೀ ಉದ್ದದಲ್ಲಿ ಲ್ಯಾವೆಂಡರ್ ಗಿಡಗಳು ಪೂರ್ತಿ ಒಣಗಿ

ಹೋಗಿದ್ದವು. ಇದು ಹಲವರ್ಷವಾದರೂ ಒಣಗಿಯೇ ಇದ್ದು, ಅಲ್ಲಿ ಹೊಸ ಗಿಡ ಬೆಳೆಸಲು ಸಾಧ್ಯವೇ ಆಗದೇ ಆ ರೈತ ಅದನ್ನು ಕೈಬಿಟ್ಟ. ಇದರಿಂದ ಈ ವಾಹನದಿಂದ ಭೂಮಿಯ ಮೇಲಾಗುವ ದುಷ್ಪರಿಣಾಮಗಳು ಸ್ಪಷ್ಟವಾದವು. ಆ ರೈತ ಸದ್ಯಕ್ಕೆ ಆರೋಗ್ಯವಂತನೂ ಆಗಿದ್ದು, ಕೆಲವು ವರ್ಷಾನಂತರ ಪಾರ್ಶ್ವವಾಯು ಹೊಡೆಯಿತು. ಅವನು ಮಾನಸಿಕ ರೋಗಿಯಲ್ಲ, ಅವನು ಹೇಳಿದ್ದು ಸತ್ಯವೇ ಎಂದು ಅಲ್ಲಿನ ಪೋಲಿಸರು ನಂಬಿದ್ದರು.

7. ಇದೇ ಫ್ರಾನ್ಸಿನ ಕುಸ್ಸಕ್ ಎಂಬಲ್ಲಿ ಒಂದು ಫಾರ್ಮ್ ಇತ್ತು. 1967ರ ಆಗಸ್ಟ್ 29, 1967 ರ ಬೆಳಿಗ್ಗೆ 10.30 ರಲ್ಲಿ ಚೆನ್ನಾಗಿ ಬಿಸಿಲಿದ್ದ ದಿನ. ಆ ಫಾರ್ಮ್ ಹೌಸಿನ ಇಬ್ಬರು ಮಕ್ಕಳು ತಮ್ಮ ದನ ಕಾಯುತ್ತಿದ್ದರು. ಅವರ ನಾಯಿ ಒಂದು ದನ ಕಾಂಪೌಂಡ್ ಹಾರಿ ಹೋಗುತ್ತಿದ್ದುದು ನೋಡಿ ಬೊಗಳಲಾರಂಭಿಸಿತು, ಆಗ 13 ವಯಸ್ಸಿನ ಹುಡುಗ ಅದಕ್ಕಾಗಿ ಎದ್ದು ಹೋಗಿ ನೋಡಿದರೆ ರಸ್ತೆಯ ಆ ಕಡೆ ನಾಲ್ಕು ಮಕ್ಕಳು ನಿಂತಿವೆ. ಅದರ ಹಿಂದೆ ಕಪ್ಪನೆಯ ಬಹಳ ಬೆಳಕು ಚೆಲ್ಲುವ ಗೋಲಾಕೃತಿ ನೆಲದ ಮೇಲೆ ಕುಳಿತಿದೆ. ಇದ್ಯಾರು ಎಂದು ತಿಳಿಯದೇ ಅವನು ತನ್ನ ತಂಗಿಯನ್ನೂ ಕರೆದನು. ಆಗ ಅವರು ನಾಲ್ಕು ಮಕ್ಕಳಲ್ಲವೆಂದೂ 1.2 ಮೀ ಎತ್ತರದ ಒಳಗಿದ್ದ ನಾಲ್ಕು ಕುಳ್ಳರು ಎಂದವರಿಗೆ ಅರಿತರು.. ಇಬ್ಬರು ಆ ಗೋಲ ವಾಹನದ ಬಳಿ ನಿಂತಿದ್ದರೆ, ಮೂರನೆಯವನು ಅದರ ಮುಂದೆ ಬಗ್ಗಿದ್ದಾನೆ. ನಾಲ್ಕನೆಯವನ ಕೈಯಲ್ಲಿ ಕನ್ನಡಿಯಂತ ಬೆಳಕು ಪ್ರತಿಫಲನ ಮಾಡುವ ವಸ್ತು ಇದೆ,ಅದನ್ನು ಅವನು ಈ ಮಕ್ಕಳತ್ತ ತೋರಿಸಿದನು. ಕಣ್ಣು ಕುಕ್ಕಿದಂತಾಯಿತು ಇವರಿಗೆ... ಇವರಿಬ್ಬರೂ ಅವರನ್ನು ಕೂಗಿ ಕರೆಯುವ ಪ್ರಯತ್ನ ಮಾಡಿದರೂ ಆ ನಾಲ್ವರು ಬೆನ್ನು ಮಾಡಿದರು. ಆದರೆ ನಡೆಯದೇ ಅವರು ಆ ಗೋಲನೌಕೆಯ ಮೇಲಿದ್ದ ಹೊಳೆಯುವ ಮುಚ್ಚಳದತ್ತ ಹಾರಿ ಒಳಗೆ ಡೈವ್ ಹೊಡೆದು ಸೇರಿಕೊಂಡರು. ಆ ನೌಕೆ ಗುಂಡಗೆ ತಿರುಗುತ್ತಾ ಆಗಸದತ್ತ ಬಹಳ ವೇಗವಾಗಿ ಹಾರಿಹೋಯಿತು, ಅದರಿಂದ ಕೆಳಗೆ ಹಿಸ್ಸ್ ಎಂಬ ಬುಸುಗುಡುವ ಹೊಗೆ ಬಂದಿತು. ಆಗ ನಾಯಿ ಬೊಗಳಿತು, ದನಗಳು ಅಂಬಾ! ಎಂಬಂತೆ ಕೂಗಿದವು. ಸಲ್ಫರ್( ಗಂಧಕ) ಗ್ಯಾಸಿನ ವಾಸನೆ ಅಲ್ಲೆಲ್ಲಾ ಹರಡಿತು.
ಅಲ್ಲಿಗೆ ಬಂದ ಅಧಿಕಾರಿಗಳಿಂದ ಅಲ್ಲಿ ಗಂಧಕದ ಹೊಗೆ ವಾಸನೆ ಇದ್ದುದು ನಿರೂಪಿತವಾಯಿತು. ಪಕ್ಕದ ಉಗ್ರಾಣದವರೂ ಹತ್ತಿರದಲ್ಲೇ ದೊಡ್ಡ ಬುಸ್ಸೆನ್ನುವ ಸದ್ದು ಬಂದಿದ್ದು ಕೇಳಿಸಿತು ಎಂದರು. ಇಬ್ಬರು ಮಕ್ಕಳ ಕಣ್ಣುಗಳೂ ಸಲ್ಫರ್ ನಿಂದ ಭಾಧಿತವಾಗಿ ಕೆಂಪಾಗಿ ಬಹಳ ದಿನಗಳ ಕಾಲ ಕಣ್ಣೀರು ಸುರಿಯುತ್ತಿತ್ತು. ಅದನ್ನು ಅವರ ಫ್ಯಾಮಿಲಿ ವೈದ್ಯರೂ ಖಚಿತಪಡಿಸಿದರು.
GEPAN ಎಂಬ ಸರಕಾರಿ ಪತ್ತೇದಾರಿ ಸಂಸ್ಥೆ 1978 ರಲ್ಲಿ ಇದನ್ನು ಮರುವಿಚಾರಣೆ ಮಾಡಿ ಈ ಘಟನೆಯು ಸತ್ಯವೆಂದೂ ಇಲ್ಲಿ ಮಕ್ಕಳು ಸುಳ್ಳು ಹೇಳುತ್ತಿಲ್ಲವೆಂದೂ, ಅಂತಾ ಒಂದು ವಾಹನ ಬಂದು ಹೋಗಿರಬಹುದು ಎಂದು ಮುಗಿಸಿದರು

8. ಇನ್ನೊಂದು ಫ್ರಾನ್ಸಿನ ಅಮರಂತ್ ಎಂಬ ಕೇಸು: 1982 ರಲ್ಲಿ ಒಬ್ಬ ಸೆಲ್ಯುಲರ್ ಬಯಾಲಜಿ ವಿದ್ಯಾರ್ಥಿ ಮಧ್ಯಾಹ್ನ 12.30 ರ ಸಮಯದಲ್ಲಿ ಸ್ಪಷ್ಟ ಆಗಸವಿದ್ದ ದಿನ ಯಾವುದೋ ಏರೋ ಪ್ಲೇನ್ ಪಕ್ಕದ ಗಾರ್ಡನ್ನಿಗೆ ಬಂದು ಅಲ್ಲೇ ಮೇಲೆ ಹಾರಾಡಿದ ಸದ್ದು ಮಾಡದೇ ನಿಂತಿದ್ದನ್ನು ಕಂಡನು. ಸುಮಾರು 3-4 ಮೀ ದೂರದಲ್ಲಿ ಮರೆಯಲ್ಲಿ ನಿಂತನು. 1 ಮೀಟರ್ ಎತ್ತರದಲ್ಲಿ 20 ನಿಮಿಷ ಅಲ್ಲಾಡದೇ ಗಾಳಿಯಲ್ಲಿ ನಿಂತಿತ್ತೆಂದೂ ಅದು ಏರೋಪ್ಲೇನ್ ಅಲ್ಲವೆಂದೂ ಅವನಿಗೆ ತಿಳಿದು ಅವನು ಗಡಿಯಾರ ನೋಡಿ ಲೆಕ್ಕ ಹಾಕಿದನು. ಆ ವಾಹನ ಮೊಟ್ಟೆಯಾಕಾರವಿದ್ದು 1 ಮೀ ವ್ಯಾಸ, 80 ಸೆ.ಮಿ. ದಪ್ಪ ಗೋಡೆಗಳು, ಕೆಳಭಾಗ ಬೆರಿಲ್ಲಿಯಮ್ ನಂತಿದ್ದು, ಮೇಲ್ಭಾಗ ನೀಲಿ ಹಸಿರು ಮೆಟಲ್ ಕವಚದಂತಿತ್ತು ಇಡೀ ನೌಕೆ ಫಳ ಫಳ ಹೊಳೆಯುತ್ತಿತ್ತು. ಹುಲ್ಲು ಅದರ ಕೆಳಗೆ ಬಾಗಿತ್ತು, ಆದರೆ ವಾಹನವು ಅದನ್ನು ಮುಟ್ಟಿರಲಿಲ್ಲ. ಆದರೆ ಆ ವಾಹನ 20 ನಿಮಿಷಾನಂತರ ಸರ್ರನೆ ಇದ್ದಕ್ಕಿದ್ದಂತೇ ಆಗಸಕ್ಕೆ ಗುಂಡಗೆ ತಿರುಗುತ್ತಾ ಹಾರಿಹೋಯಿತು. ಆ ವಾಹನ ಹೋದನಂತರ ಆ ಹುಲ್ಲು ಮತ್ತೆ ಸ್ವಾಭಾವಿಕವಾಗಿ ಎದ್ದು ನಿಂತಿತು. ಆದರೆ ಸುತ್ತಲಿದ್ದ ಅಮರಂತ್ ಪೊದೆಯ ಗರಿಗಳು ಎಲೆಕ್ಟ್ರಿಕಲ್ ಫೀಲ್ಡಿಗೆ ಸಿಕ್ಕಿದಂತೆ ಬಾಡಿದ್ದವು. ಅಲ್ಲಿ ಮತ್ತೆ ಪೂರ್ಣವಾಗಿ ಪರೀಕ್ಷಿಸಿದಾಗ ಕನಿಷ್ಟ ಪಕ್ಷ 30 kv/m ವಿದ್ಯುತ್ ಆ ಹುಲ್ಲಿನ ಮೇಲೆ ಹರಿದಿರಬೇಕು, ಮತ್ತು ಪಕ್ಕದ ಅಮರಂತ್ ಪೊದೆಗಳ ಮೇಲೆ 200 kv/ m ವಿದ್ಯುತ್ ಹರಿದಿರಬೇಕು ಎಂದು ನಿರ್ಧರಿಸಿದರು. ಇದು ಒಮ್ಮು ನೌಕೆಗೆ ಬಹಳ ಅನೂಹ್ಯ ವಿದ್ಯುತ್ಚಕ್ತಿ ಎಂದು ಹೇಳಬೇಕಿಲ್ಲ

## ಎರಡನೇ ಬಗೆಯ ಕ್ಲೋಸ್ ಎನ್ಕೌಂಟರ್:

1. **ಫ್ಯಾಲ್ಕನ್ ಲೇಕ್, ಕೆನಡಾ, 1967:**

**ಇದರಲ್ಲಿ ಅಂತರಿಕ್ಷ ವಾಹನವನ್ನು ಮುಟ್ಟಿ ಆರೋಗ್ಯ ಹಾಳಾದ ಕೇಸ್:** ಅಂದು

1967 ಮೇ 20, ಸ್ಟೀಫೆನ್ ಮಿಕಲಾಕ್ ಎಂಬ ಇಂಡಸ್ಟ್ರಿಯಲ್ ಮೆಕ್ಯಾನಿಕ್ , ವಿನ್ನಿಟೋಬಾ ಊರಿನವನು ಫ್ಯಾಲ್ಕನ್ ಲೇಕ್ ಬಳಿ ಕೆಲಸ ನಿಮಿತ್ತ ಬಂಡೆಗಳನ್ನು ಸ್ವಡಿ ಮಾಡುತ್ತಿದ್ದ ಸಮಯದಲ್ಲಿ ಎರಡು ಗಗನನೌಕೆಗಳು ಹತ್ತಿರ ಬಂದವಂತೆ.ಅದರಲ್ಲಿ ಒಂದು ನೌಕೆ ಸ್ವಲ್ಪ ಹೊತ್ತು ಗಗನದಲ್ಲಿದ್ದು ದೂರಕ್ಕೆ ಹಾರಿಹೋಗಿ ಮರೆಯಾಯಿತಂತೆ. ಇನ್ನೊಂದು ನೌಕೆ ಇವನಿದ್ದ 100 ಅಡಿ ದೂರದಲ್ಲಿ ಇಳಿಯಿತು. ಇವನು ಅದರ ಹತ್ತಿರ ಹೋಗಲು ಅದರ ಪಕ್ಕದ ಬಾಗಿಲು ತೆಗೆಯಿತು ಮತ್ತು ಒಳಗಿನಿಂದ ಮಾತಾಡುವ ವಿಚಿತ್ರ ಸದ್ದು ಕೇಳಿಸಿತು.

ಆಗ ಇವನು ಕೂಗಿ ಅವರ ಗಮನ ಸೆಳೆಯಲು ಪ್ರಯತ್ನಿಸಿದ. ಅದರೊಳಗೆ ಹಳದಿ ಮತ್ತು ನೀಲಿ ಬಣ್ಣದ ಬಹಳ ಪ್ರಕಾಶಮಾನವಾದ ಬೆಳಕು ಇದ್ದುದರಿಂದ ಏನೂ ಕಾಣಿಸಲಿಲ್ಲ. ಸ್ಟೀಫನ್ ಅವರ ಜತೆ 6 ಭಾಷೆಗಳಲ್ಲಿ ಅವರ ಜತೆ ಮಾತಾದಲು ಪ್ರಯತ್ನ ಪಟ್ಟನಂತೆ (ಇಂಗ್ಲೀಷ್, ಫ್ರೆಂಚ್, ಜರ್ಮನ್, ರಶ್ಯನ್, ಇಟಾಲಿಯನ್, ಉಕ್ರೇನಿಯನ್).ಆಗ ಬಾಗಿಲು ಮತ್ತೆ ಸರ್ರನೆ ಮುಚ್ಚಿಕೊಂಡಿತು. ನೌಕೆಯು ಆಂಟಿ ಕ್ಲಾಕ್-ವೈಸ್ ( ಗಡಿಯಾರಕ್ಕೆ ವಿರುದ್ಧ, ಅಪ್ರದಕ್ಷಿಣೆ) ಆಗಿ ತಿರುಗಿತಂತೆ, ಅದು ಶುರುವಾಗಿ ಹೋಗಿಬಿಡಬಹುದೆಂದು ಭಾವಿಸಿ ಅವನು ಗ್ಲೋವ್ಸ್ ಹಾಕಿದ ಎಡಗೈ ಚಾಚಿದನು..ಅದನ್ನು ಮುಟ್ಟಿದಾಗ ತಕ್ಷಣ ಗ್ಲೋವ್ಸ್ ಹಾಕಿದ ಕೈ ಸುಟ್ಟುಹೋಯಿತು. ಆ ನೌಕೆ ಹಾರಿದಾಗ ಇವನ ಟೋಪಿ, ಉಟ್ಟ ಶರಟು, ಪ್ಯಾಂಟ್ಸ್, ಒಳುಡುಪು ಮತ್ತು ಹೊಟ್ಟೆ ಎದೆ, ಭುಜವೆಲ್ಲಾ ಸುಟ್ಟಂತೆ ಉರಿಯಾಯಿತು. ನೋಡಿಕೊಂಡರೆ ನಿಜಕ್ಕೂ ಸುಟ್ಟೇ ಹೋಗಿದೆ. ನಂತರ ಅನಾರೋಗ್ಯದಿಂದ ಅವನು ಬಹಳ ದಿನಕಾಲ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಬೇಕಾಯಿತು.

RCMP Crime labsನಲ್ಲಿ ಆತನ ಬಟ್ಟೆ ಇತ್ಯಾದಿಗಳನ್ನು ಬಹಳ ಧೀರ್ಘವಾಗಿ ಪರೀಕ್ಷೆ ಮಾಡಲಾಯಿತು. ಅಲ್ಲಿ ಅಂತಾ ಬೆಂಕಿಯಿಂದ ಸುಟ್ಟಿರುವ ಕಾರಣ ತಿಳಿಯಲೇ ಇಲ್ಲ.

ಅಲ್ಲದೆ ಆ ಸ್ಥಳದ ಮಣ್ಣಿನ ಸ್ಯಾಂಪಲ್ಸ್ ಅನ್ನು ಪ್ರಯೋಗಾಲಯದಲ್ಲಿ ಪರೀಕ್ಷಿಸಿದಾಗ ರೇಡಿಯೋ ಆಕ್ಟಿವ್, ವಿಕಿರಣ ಉಂಟಾಗಿರುವುದು ಕಂಡು ಬಂದಿತು.

ಅವನು ಆಸ್ಪತ್ರೆಯಿಂದ ಹೊರಬಂದ ಮೇಲೆ ಮತ್ತೆ ವಿಚಾರಿಸಿ ಆ ಸೈಟಿಗೂ ಕರೆದೊಯ್ದರು.

ಅಲ್ಲಿ ಅವನೊಂದಿಗೆ ಅಂದಿನ ದಿನ ಮರುನೆನೆಸಿಕೊಂಡಾಗ

" ಅಂದು ಸ್ಟೀಫನ್ ಒಂದು ಬಗೆಯ ಹೊಗೆಯುಗುಳುವ ಗ್ರಿಡ್ ಟೈಪ್ ಎಕ್ಸಾಸ್ಟ್ ಬಳಿ ನಿಂತಿದ್ದು ಆ ನೌಕೆ ಹೊರಟಾಗ ಬಂದ ಬಿಸಿ ಹೊಗೆ ಮತು ಬೆಂಕಿಯಿಂದ ಬಟ್ಟೆ ಮತ್ತು ಮೈ ಸುಟ್ಟಿದ್ದು ಎಂತಲೂ, ಅವನು ಆಗ ತಕ್ಷಣ ಓಡುತ್ತಾ ದೂರದಲ್ಲಿದ್ದ ತನ್ನ ಕಂಪಾಸುಗಳ ಬಳಿ ಹೋದಾಗ ಅದರ ಮುಳ್ಳುಗಳು ಹುಚ್ಚು ಹಿಡಿದಂತೆ ದಿಕ್ಕೆಟ್ಟು ತಿರುಗುತ್ತಿದ್ದವೆಂದೂ ಆ ನೌಕೆ ದೂರ ಹೋದಮೇಲೆ ಅದೂ ಸುಮ್ಮನಾಯಿತೆಂದೂ ಗೊತ್ತಾಯಿತು. ಆತನಿಗೆ ಆಗ ವಾಂತಿ, ತಲೆ ನೋವು ಕೂಡಾ ಅಲ್ಲೇ ಉಂಟಾಯಿತೆಂದು ಹೇಳಲಾಯಿತು..."

ಆತ ಬರೆದ ಗಗನನೌಕೆಯ ಚಿತ್ರ ಮತ್ತು ಆತನ ಫೋಟೋ ಕೆನಡಾ ಸರಕಾರೀ ದಾಖಲೆಯಲ್ಲಿದೆ...





**ಮೊದಲಿಗೆ ಇಂತಾ ಯಾವುದೇ ವಾಹನ 1967ರಲ್ಲಿ ಯಾರ ಬಳಿಯೂ ಇರಲಿಲ್ಲವೆಂದೂ, ಭೂಮಿಯದೇ ಆಗಿದ್ದರೆ ಆ ತರಹದ ತಂತ್ರಜ್ಞಾನ ಸಾರ್ವಜನಿಕವಾಗಿ ಎಲ್ಲರ ಕಣ್ಣಿಗೆ ಸಿಗುತ್ತಿರಲಿಲ್ಲವೆಂಬುದು ಒಂದಾದರೆ, ಜಾನ್ ಶುಸ್ಲರ್ ಎಂಬ ಏರೋನಾಟಿಕಲ್ ಎಂಜಿನಿಯರ ಸಂಶೋಧನೆಯ ಪ್ರಕಾರ `UFO ಕಂಡೆ' ಎಂದು ಬಂದವರ ಕೇಸುಗಳಲ್ಲಿ 400 ಇದೇ ರೀತಿಯ ಮೆಡಿಕಲ್ ಗಾಯ ಮತ್ತು ಅನಾರೋಗ್ಯವಾದ ದಾಖಲೆಗಳು ಅವನ 1995ರ ಕೆಟಾಲಾಗ್ ಫೈಲಿನಲ್ಲಿವೆ ಎಂಬುದೂ ಗಮನಾರ್ಹ**.

2. **Trans en provence, France: ( ಫ್ರಾನ್ಸ್)**

ಜನವರಿ 8, 1981: ರೆನಾಟೋ ನಿಕೊಲಾಯ್ 55 ಎಂಬಾತ ರಾತ್ರಿ ತನ್ನ ಹೊಲದಲ್ಲಿ ವಿಚಿತ್ರ ಗಗನ ನೌಕೆ ಬಂದಿಳಿಯಿತೆಂದು ವರದಿ ಕೊಟ್ಟಾಗ ಜೆಂಡಾರ್ಮ್ ಪೋಲಿಸರು ಅದರ ಪತ್ತೆ ಶುರು ಮಾಡಿದರು

ಆತನ ದೂರು ಹೀಗಿತ್ತು:

*" ರಾತ್ರಿ ನನ್ನ ಕ್ಯಾಬಿನ್ ಕಿಟಕಿಯಿಂದ ಹತ್ತಿರದ ಪೈನ್ ಮರಗಳ ಎತ್ತರದಲ್ಲಿ ದೊಡ್ಡ ಹಡಗಿನಂತದು ಮೆಲ್ಲಗೆ ಇಳಿಯುತಿತ್ತು. ಅದು ಕೆಳಗೇ ಇಳಿದೇ ಬಿಟ್ಟಿದ್ದರಿಂದ ನಾನು ಓಡಿಹೋಗಿ ನೋಡಿದೆ. "ನಮ್ಮ ಮಿಲಿಟರಿಯವರು ಜನರಿಗೆ ಹೇಳದೇ ಹೀಗೆಲ್ಲಾ ಮಾಡಬಾರದು, ಭಯಪಡುವಂತೆ" ಎಂದುಕೊಳ್ಳುತ್ತಾ. 30 ಮೀಟರ್ ಅಡಿ ದೂರದಲ್ಲಿ ಮರಗಳ ನಡುವೆ ನಿಂತು ನೋಡಿದೆ. ಅದು ಗೋಲಾಕೃತಿಯಲ್ಲಿದ್ದು ನೆಲದ ಮೇಲೆ ನಿಂತು ವಿಸಲ್ ( ಸಿಳ್ಳೆ) ಹೊಡೆಯುವ ಸದ್ದು ಮಾಡುತ್ತಿತ್ತು. ಸ್ವಲ್ಪ ಹೊತ್ತಿಗೆ ಅದರ ಸದ್ದು ಜಾಸ್ತಿಯಾಗಿ ಅದು ಮೇಲೇರಿತು. ಮರದ ಎತ್ತರಕ್ಕೆ ಬಂದ ಕೂಡಲೇ ತನ್ನ ದಿಕ್ಕು ವೇಗ ಎಲ್ಲವನ್ನೂ ಬದಲಿಸಿಕೊಂಡು ಬಲು ಬೇಗ ಮಾಯವಾಯಿತು. ಅಲ್ಲಿ ಹೊಗೆಯಾಗಲಿ ಬೆಂಕಿಯಾಗಲಿ ಬರಲಿಲ್ಲ. ಆ ನೌಕೆಯು ಎರಡು ಸಾಸರ್ ಉಲ್ಟಾ ಇಟ್ಟಂತಿತ್ತು, 1.5 ಮೀ ಎತ್ತರವಿತ್ತು. ಆದು ನಿಂತಿದ್ದ ಜಾಗದಲ್ಲಿ ಗುಂಡನೆ ಮಾರ್ಕ್ ಮತ್ತು ಕೆಲವು ಒತ್ತಿದಂತಾ ಜಾಗಗಳಾಗಿವೆ..."*

ಪೋಲಿಸ್ ಪತ್ತೆ ಟೀಮಿನವರು ಅಲ್ಲಿನ ಮಣ್ಣಿನ ಗಿಡಗಳ ಮರಗಳ ಸ್ಯಾಂಪಲ್ಸ್ ತೆಗೆದುಕೊಂಡು ಹೋಗಿ ಟೂಲೂಸ್ ಯೂನಿವರ್ಸಿಟಿಯ ಲ್ಯಾಬುಗಳಲ್ಲಿ ಪರೀಕ್ಷೆ ಮಾಡಿಸಿದರು. ಅವರ ತೀರ್ಪು:

- ಆ ಮಣ್ಣಿನಲ್ಲಿ ಏನೋ ಇಳಿದಿದ್ದು ನಿಸ್ಸಂದೇಹ
- ಚಿಕ್ಕ ಎಳೆ ಎಲೆಗಳೂ ಸುಟ್ಟಂತೆ ಕ್ಲೋರೋಫಿಲ್ ಬದಲಾಗಿ ಹಾಳಾಗಿದೆ, ವಿಪರೀತ ಶಾಖ ತಗುಲಿದೆ
- ಇದು ಸರಿಯಾಗಿ ಎಲೆಕ್ಟ್ರಿಕಲ್ ಎನರ್ಜಿಯೋ ಅಥವಾ ಅಣುವಿಕರಣವೋ ನಮಗೆ ಗೊತ್ತಾಗುತ್ತಿಲ್ಲ, ಬಯೊ-ಕೆಮಿಕಲ್ ವ್ಯತ್ಯಾಸಗಳು ಗಾಢವಾಗಿವೆ
- ಅಲ್ಲಿನ ಮಣ್ಣಿಗೂ ಅದರಿಂದ ದೂರವಿದ್ದ ಮಣ್ಣಿಗೂ ರಾಸಾಯನಿಕ ವ್ಯತ್ಯಾಸಗಳು ಬಹಳ ಆಗಿವೆ.
- ಮಾಸ್, ಮೆಕಾನಿಕ್ಸ್, ಹೀಟಿಂಗ್ ಎಲ್ಲವೂ ಅತ್ಯಂತ ಹೆಚ್ಚಿನ ರೀತಿಯಲ್ಲಿ ಆಗಿದೆ. ಇದಕಿಂತಾ ಹೆಚ್ಚಿಗೆ ನಿರ್ಧಾರಕ್ಕೆ ಬರಲು ನಮಗೆ ಅಂತಾ ಜ್ಞಾನ, ಮಾಹಿತಿ ಇಲ್ಲ.

**ಅಂತಿಮವಾಗಿ:**

**ಹೀಗೇ ನಾವು ಹಲವು ದಾಖಲೆಗಳಿಂದ UFO ನೋಡಿದವರ ಉದಾಹರಣೆಗಳನ್ನು ಕೊಡುತ್ತಲೇ ಹೋಗಬಹುದು, ಅದಕ್ಕೆ ಮಿತಿಯೆ ಇಲ್ಲ...**

**ಆದರೆ ಒಟ್ಟಾರೆ ಹೇಳುವುದಾದರೆ**:'

1. ಎಲ್ಲಾ ಕಡೆಯೂ ಅನಿರೀಕ್ಷಿತವಾಗಿ ಕಂಡಿದ್ದನ್ನು ಜನರು ಪ್ರಾಮಾಣಿಕವಾಗಿ ಚಿತ್ರ, ಡ್ರಾಯಿಂಗ್ ಮತ್ತು ಹೇಳಿಕೆ ಮೂಲಕ ಸ್ಪಷ್ಟಪಡಿಸಿದ್ದಾರೆ.
2. ಜನರೆಲ್ಲಾ ಸುಳ್ಳು, ತಪ್ಪು ಹೇಳುವವರೆಂದರೂ ಸಹಸ್ರಾರು ಕೇಸುಗಳಿಗೆ ಇರುವ ಹೋಲಿಕೆ ಮತ್ತು ಅನುಭವದಲ್ಲಿ ದೇಶ ವಿದೇಶ, ಕಾಲ,ಸಮಯ, ನೋಡುಗರ ವಯಸ್ಸು, ವೃತ್ತಿ, ಹವಾಮಾನ , ಉದ್ದೇಶ ಎಲ್ಲವೂ ವ್ಯತ್ಯಾಸವಾಗಿದ್ದು ಹೆಚ್ಚಿನವನ್ನು ನಂಬಲೇ ಬೇಕಾಗುತ್ತದೆ.
3. ಎಲ್ಲವೂ ಸರಕಾರಿ ಅಧಿಕಾರಿಗಳ ದಾಖಲೆಯಲ್ಲಿದ್ದು ಮುಕ್ಕಾಲುವಾಸಿ ಅವನ್ನು ಕ್ಲೋಸ್ ಮಾಡಲಾಗಿಲ್ಲ. ಏನಾದರೂ ವೈಜ್ಞಾನಿಕ ಸಬೂಬು ಹೇಳಿ ತಮ್ಮ ಮಾಹಿತಿಯ ಕೊರತೆಯನ್ನು ತೋರದೇ/ ರಹಸ್ಯವನ್ನು ಮುಚ್ಚಿಹಾಕುವ ಮನಸ್ಥಿತಿಯೇ ಎದ್ದು ಕಾಣುತ್ತದೆ.

ಇಂತಾ ದಾಖಲೆಗಳ ರೆಫೆರೆನ್ಸ್ ಅಂತರ್ಜಾಲದಲ್ಲಿ ಇದೆ. ಕೊನೆಯಲ್ಲಿ ಅವನ್ನು ಕೊಡುವೆ.

ಇನ್ನು **ಕ್ಲೋಸ್ ಎನ್ಕೌಂಟರ್ಸ್ ( ಮೂರನೇ ಬಗೆಯದು**) ಕೇಸುಗಳಲ್ಲಿ ಎದುರಿಗೇ ಅನ್ಯಗ್ರಹ ಜೀವಿಗಳನ್ನು ಕಂಡವರು, ಮಾತಾಡಿದವರು ಇಂತವರ ಬಗ್ಗೆ ನೋಡೋಣ...

# 4ನೆ ಕಂತು:

ಅಧ್ಯಾಯ 3.---ಮುಂದುವರೆದಿದೆ




1957 ರ ಅಗಸ್ಟ್ 15 ರಂದು ಒಹಾಯೋ ಸ್ಟೇಟ್ ವಿಶ್ವವಿದ್ಯಾಲಯದ ಬಿಗ್ ಇಯರ್ ರೇಡಿಯೋ ಟೆಲಿಸ್ಕೋಪಿನಲ್ಲಿ ಕೇಳಿಬಂದ ನ್ಯಾರೋ ಬ್ಯಾಂಡ್ ರೇಡಿಯೋ ಸಿಗ್ನಲ್ ಒಂದಕ್ಕೆ ಅಲ್ಲಿನ ತಜ್ಞ- ಜೆರ್ರಿ ಆರ್ ಎಹ್ಮನ್ ಇಂತದನ್ನು ಅಂತರಿಕ್ಷದಲ್ಲೂ, ಭೂಮಿಯಲ್ಲೂ ಮುಂಚೆ ಕೇಳಿಲ್ಲವೆನ್ನುವುದಕ್ಕೆ "ವಾವ್" ಎಂದು ಬರೆದುದರಿಂದ ಆಗಿನಿಂದ ಎಲ್ಲರೂ ಇದನ್ನು WOW signal ಎನ್ನುತ್ತಾರೆ.

ಇದು "ಧನು ರಾಶಿ" ಮಂಡಲ (sagittarius) ಎಂಬ ಕಡೆಯಿಂದ ಬಂದ ಪ್ರಬಲವಾದ ಅನ್ಯಗ್ರಹದೆನ್ನಲಾದ ಸಿಗ್ನಲ್, ಮತ್ತೆ ಅವರಿಗೆ ಕೇಳಿಬರಲಿಲ್ಲ.

ಯಾರೋ ನಮ್ಮನ್ನು ಸಂಪರ್ಕಿಸಲು ಪ್ರಬಲವಾದ ಹೈಡ್ರೋಜೆನ್ ಸಂಬಂಧಿತ 1420 megahertz (21 centimeters) ಸಿಗ್ನಲ್ ಬಿಟ್ಟಿದ್ದಾರೆ ಎಂದು ಆಗಿನಿಂದ ಹಲವು ರಿಸರ್ಚ್ ಪತ್ರಿಕೆಗಳಲ್ಲಿ ತಜ್ಞರು ವರದಿ ಮಾಡಿದ್ದಾರೆ.

https://en.wikipedia.org/wiki/Wow!_signal

ಬನ್ನಿ, ಇನ್ನು ಮಾನವ ಭೇಟಿ ಕೇಸುಗಳತ್ತ ಗಮನ ಹರಿಸೋಣ...

**ಕ್ಲೋಸ್ ಎನ್ಕೌಂಟರ್ಸ್ ಆಫ್ ದಿ ಥರ್ಡ್ ಕೈಂಡ್:**

*ಅದೇ ನಾನು ಆಗಲೇ ಹೇಳಿದಂತೆ ಸ್ಟೀವನ್ ಸ್ಪಿಯಲ್ಬರ್ಗ್ ರವರ ಪ್ರಸಿದ್ಧ ಚಿತ್ರ 1977 ರಲ್ಲಿ ಈ ಹೆಸರಿನಲ್ಲಿ, ಈ ವಿಚಾರದಲ್ಲಿ ಬಂದಿತ್ತು. ನಾಯಕನಾಗಿ ರಿಚರ್ಡ್ ಡ್ರೇಫಸ್ ಕೊನೆಗೂ ಅನ್ಯಗ್ರಹ ಜೀವಿಗಳನ್ನು ಭೆಟ್ಟಿಯಾಗೇ ಬಿಡುತ್ತಾನೆ.*

*ಸರಿ, ಅದೇನೋ ಕಾಲ್ಪನಿಕ ಚಿತ್ರ...*

ನಿಜಜೀವನದಲ್ಲಿ ಅನ್ಯಗ್ರಹ ಜೀವಿಗಳನ್ನು ಕಂಡು ಮಾತಾಡಿಸುವುದು ಎಂದರೇನು**?...ಇಂಗ್ಲೀಷೆ? ಕನ್ನಡವೇ? ಹಿಂದಿಯೆ?** ಯಾವ ಭಾಷೆಯಲ್ಲಿ ಎಂಬ ಗೊಂದಲ ಮೊತ್ತ ಮೊದಲು ಕಾಡೀತು...!

- **ಅಂತಾ ಅತಿ ಮಾನುಷ ಶಕ್ತಿಯನ್ನು ಹೊಂದಿದ ಆ ಜೀವಿಗಳಿಗೆ ಮೊದಲು ಇಲ್ಲಿಗೆ ಬರುವ ಉದ್ದೇಶವೇನು? ಹೇಗೆ ಬಂದರು?...ಅಂತರಿಕ್ಷದಲ್ಲೇನೂ ಭೂಮಿಗೆ -> ಎಂಬ ರೈಲುಮಾರ್ಗ ಕಟ್ಟಿಲ್ಲ ( ಭೂಮಿ ಅಥವಾ earth ಕೂಡಾ ನಾವೇ ಇಟ್ಟುಕೊಂಡ ಹೆಸರು, ಎಲ್ಲರಿಗೂ ಗೊತ್ತಿರಲಿಕ್ಕಿಲ್ಲ), ದೊಡ್ಡ ನಕ್ಷೆಯೂ ಇಟ್ಟಿಲ್ಲ(?), ವಿಮಾನ ಮಾರ್ಗ ಬರೆದಿಟ್ಟಿಲ್ಲ...ಕತ್ತಲು ಬೆಳಕಿನ ದಿಕ್ಕು ದಿಶೆ ತಿಳಿಯದಂತ ಬ್ರಹ್ಮಾಂಡ!**
- **ಹಾಗೆಲ್ಲ ನಮ್ಮನ್ನು  ಈ ಅಗಾಧ 93 ಬಿಲಿಯನ್ ಜ್ಯೋತಿವರ್ಷ ವ್ಯಾಸದ ಗೋಲದ ವಿಶ್ವದ ಮೂಲೆಯಲ್ಲಿರುವ ನಮ್ಮನ್ನು ಎಲ್ಲಿಂದಲೋ ಹುಡುಕಿಕೊಂಡು ಬಂದುದಕ್ಕೆ ಸಹಸ್ರಾರು ಜ್ಯೋತಿವರ್ಷವೇ ಆಗಿರಬೇಕಲ್ಲ?... ಅವರಿಗೆ ವಯಸ್ಸಾಗಿ ಸಾಯುವುದಿಲ್ಲವೆ ಮತ್ತೆ?...**
- **ಅದೂ ಪರವಾಗಿಲ್ಲ ಎಂದರೆ ಅವರು  ನಮ್ಮನ್ನು ಗೆಳೆಯರಂತೆ ನೋಡುವರೇ ಇಲ್ಲವೇ ಹಿಂದುಳಿದ ಗ್ರಹವೊಂದರ ಪ್ರಾಣಿಗಳಂತೆ ನಮ್ಮನ್ನು ಕಂಡಾಗ ಕೊಂದು ಇಲ್ಲೇ ವಸಾಹತು ಮಾಡಿಕೊಳ್ಳುವರೋ? ಯುದ್ಧಸನ್ನದ್ಧರಾಗಿ ಬಂದಿರುವರೋ ಇಲ್ಲವೋ?**
- **ಇಲ್ಲವೇ ತಮಾಷೆಗೆಂದು ಜಾಲಿಯಾಗಿ ಆಕಾಶದಲ್ಲಿ ಸುತ್ತುತ್ತಾ ಬಂದವರು ನಮ್ಮನ್ನೆಲ್ಲಾ ಮೃಗಾಲಯದಲ್ಲಿನ ಯಾವುದೋ ನಮೂನೆಗಳಂತೆ ಕಂಡು ನಕ್ಕು ಮುಂದೆ ಹೋಗುವರೋ?**
- **ಇದ್ಯಾವುದರ ಅರಿವೂ ಯಾರೊಬ್ಬನಿಗೂ ಆ ಗ್ರಹದ ಜೀವಿಗಳನ್ನು ಕಂಡಾಗ ಇಲ್ಲದಿರುವುದೇ ದೊಡ್ಡ ಸಮಸ್ಯೆ...**

ಆದರೂ ಹಲವಾರು "**ಥರ್ಡ್ ಕೈಂಡ್** " ಬಗೆಯ ಸಂಪರ್ಕಗಳು ಆಗಿವೆ... ಜನರು ಅವನ್ನು ನೆನೆಸಿಕೊಂಡು 100 ಕ್ಕೆ 100 % ಖಚಿತವಾಗಿ ಮನಶಾಸ್ತ್ರಜ್ಞರ ಬಳಿ ಸಮ್ಮೋಹನಗೊಳಿಸಿದಾಗ ಬೆಚ್ಚಿ ಬೀಳುವ ವಿವರಗಳೊಂದಿಗೆ ಹೇಳಿಯೂ ಇದ್ದಾರೆ.

ಆಂಗ್ಲ ಸಾಹಿತ್ಯದಲ್ಲಿ, ಸಮಾಜದಲ್ಲಿ ಪ್ರಚಲಿತವಿರುವ, ಪ್ರಸಾರವಾಗಿರುವ/ ಪ್ರಕಟವಾಗಿರುವ ಕೆಲವು ಸಂಗತಿಗಳನ್ನಷ್ಟೇ ನಾನು ಹೇಳಬಲ್ಲೆ.

**ಇದೆಲ್ಲಾ ಸತ್ಯವೋ ಸುಳ್ಳೋ ನೀವೇ ನಿರ್ಧರಿಸಿಕೊಳ್ಳಿ. ಕೆಲವರಾಗಲೇ ನನ್ನನ್ನು ಟೀಕಿಸಲು ಹೊರಟರು. ನಾನು ಬರೀ ವರದಿಗಾರನಂತೆ, ಮಾಹಿತಿ ಸಂಗ್ರಹಗಾರನಂತೆ ನನ್ನ ಅಭಿಪ್ರಾಯ ಮಾತ್ರ ಹೇಳಬಲ್ಲೆ...**

***ಅದರಲ್ಲೂ ನಾನು ಕೆಲವು ಟಿಪಿಕಲ್/ ನಂಬಬಹುದಾದ ಕೇಸುಗಳನ್ನು ಮಾತ್ರ ಆರಿಸಿಕೊಂಡಿದ್ದೇನೆ..ನಾನೇ ನಂಬಲಾಗದ್ದನ್ನು, ತೀರಾ ವಿವಾದಾಸ್ಪದ, ಮಸಾಲೆಯಿದ್ದ ಘಟನೆಗಳನ್ನು ಕೈ ಬಿಟ್ಟಿದ್ದೇನೆ.ಅವೆಲ್ಲ ಸುಳ್ಳು ಅಂತಲ್ಲ, ಇವೆಲ್ಲವೂ ನಿಜವೇ ಎಂದು ನಾನು ವಾದಿಸುತ್ತಿಲ್ಲ... ಅದಕ್ಕಾಗಿಯೇ ಆ ರೆಫೆರೆನ್ಸ್ ಪುಸ್ತಕಗಳ ಹೆಸರನ್ನು ಕೊನೆಯಲ್ಲಿ ಹಾಕುತ್ತೇನೆ...ನೀವೇ ಮಿಕ್ಕವನ್ನೂ ಓದಿ ತಿಳಿದುಕೊಳ್ಳಬಹುದು.***

ಆದರೆ ಈ ವಿಷಯವೇ ಸಾರಾಸಗಟಾಗಿ ಸುಳ್ಳೆಂದು ಮೂಗು ಮುರಿಯುವವರಿಗೆ  **Damning evidence** ಆಗಲಿದೆ ಎಂಬುದು ನನ್ನ ನಂಬಿಕೆ... ಇದೆಲ್ಲಾ ಸುಳ್ಳಾದರೆ ಸತ್ಯ ಏನು, 'ಏನೂ ಇಲ್ಲ' ಎಂದೇ?...ಅದನ್ನು ಅವರೇ ಹೇಳಬೇಕು.

ಈ ರೀತಿಯ ನೇರ ಸಂಪರ್ಕ ಪಡೆದವರ ಕೇಸುಗಳು ಸಾಧಾರಣವಾಗಿ ಮನಃಶಾಸ್ತ್ರಜ್ಞರ ಹತ್ತಿರ ಹೋಗುತ್ತವೆ. ಯಾಕೆಂದರೆ ಇವರು ಹೇಳಿದ್ದು ಬಹಳ ವಿಚಿತ್ರವಾಗಿದ್ದು ಸಾಮಾನ್ಯರ ದೃಷ್ಟಿಯಿಂದ ನಂಬಿಕೆ ಅರ್ಹವೇ ಇಲ್ಲವೆ ಎಂದು ಅನುಮಾನ ಬರುವುದು ಸಹಜ, ಹಾಗಾಗಿ, ಅಧಿಕಾರಿಗಳು ತಜ್ಞರ ಬಳಿ ಕಳಿಸುತ್ತಾರೆ. ಅಲ್ಲದೇ ಹಲವರಿಗೆ ನಮಗೇನೋ ವಿಚಿತ್ರ ಅನುಭವ ಆಯಿತು ಆದರೆ ತಾತ್ಕಾಲಿಕವಾಗಿ ಎಲ್ಲಾ ಮರೆತು ಹೋದಂತೆಯೂ, ಹಾಗೂ ಅವರ ದಿನಚರಿಯಲ್ಲಿ ಸ್ವಲ್ಪ ಸಮಯ, ಕೆಲವೊಮ್ಮೆ ದಿನವೇ

ನಷ್ಟವಾಯಿತೆಂದೂ ಎಲ್ಲಿಗೆ ಹೋಗಿದ್ದೆವೆಂದು ತಿಳಿಯದೆಂದೂ ಹೇಳುವುದು ಸಾಮಾನ್ಯ..ಇದೆಲ್ಲಾ ತನಿಖೆ ಮಾಡಲರ್ಹ ಎಂದು ಭಾವಿಸುವುದೂ ಸಹಜವೇ.

ಇಲ್ಲಿ ಉಲ್ಲೇಖಿಸಿರುವ ಮುಂದಿನ ಕೇಸುಗಳಲ್ಲಿ ಈ ಕೆಲವು ಅಂಶಗಳು ನಮ್ಮ ಮನಸ್ಸಿಗೆ ತಟ್ಟುವ ತೀರ್ಮಾನಗಳು:

- **ಎಲ್ಲಾ ಅನ್ಯಗ್ರಹವಾಸಿಗಳು "ಒಂದೇ ಗ್ರಹದಿಂದ" ಬಂದವರಲ್ಲ, ದೂರದೂರದ ಪ್ರತ್ಯೇಕ ಸೌರಮಂಡಲಗಳಿಂದ ಬೇರೆ ಬೇರೆ ಕಾರಣಗಳಿಗೆ ಇಲ್ಲಿಗೆ ನಮ್ಮನೇ ಹುಡುಕುತ್ತಲೋ, ಅಥವಾ ಅಕಸ್ಮಾತಾಗಿಯೋ ಬಂದವರು ಎನಿಸುತ್ತದೆ.**
- **ಅದಕ್ಕಾಗಿಯೇ ಅವರವರ ಪ್ರಗತಿ, ಉದ್ದೇಶ, ಮನಃಸ್ಥಿತಿ ಮತ್ತು ಅವರ ವಾಹನಗಳು, ಅದರ ವಿನ್ಯಾಸ, ವಯಸ್ಸು , ಕಾಲ ಎಲ್ಲವೂ ವೈವಿಧ್ಯಮಯವಾಗಿದ್ದು, ಆಯಾ ಗ್ರಹ/ ಲೋಕದ ಪ್ರಗತಿಗೆ ತಕ್ಕುದಾಗಿವೆ. ಅಂದರೆ ಹಲವು ಬಗೆಯ ಜೀವಿಗಳು ಈ ರೀತಿ ಅಂತರಿಕ್ಷದಲ್ಲಿ ಪಯಣ ಮಾಡುವ ಶಕ್ತಿಯನ್ನು ಉಳ್ಳವರಾಗಿದ್ದಾರೆ ಎಂಬುದು ನಿರೂಪಿತವಾಗುತ್ತದೆ.**
- **ಕೆಲವರು 4 ಅಡಿ ಬೂದಿ ಕುಳ್ಳರಾದರೆ, ಮಿಕ್ಕವರು ಹಳದಿ ಕೂದಲಿನ ನಾರ್ಡಿಕ್ ಯುರೋಪಿಯನ್ನರಂತೆಯೂ, ಚೀನಾದಂತ/ ಮಂಗೋಲಾಯ್ಡ್ ಪೀಳಿಗೆಯ ಆಲ್ಬಿನೋ (ಪಿಗ್ಮೆಂಟ್ ಇಲ್ಲದ ಬಿಳಿಚರು) ತರಹವೂ ಇರಬಹುದು. ಹಲವು ಜೀವಿಗಳು ಸಂಪರ್ಕಿಸಿದವರ ಇಚ್ಛೆಗೆ ತಕ್ಕಂತೆ ತಂತಮ್ಮ ರೂಪ, ಆಕಾರ ಬದಲಿಸಿ ಹೇಗೆ ಬೇಕೋ ಹಾಗೆ ಕಾಣಿಸಬಲ್ಲವರಾಗಿದ್ದಾರೆ ( ಇವರ ನಂಬಿಕೆ, ಆತ್ಮವಿಶ್ವಾಸ ಗಳಿಸಲು ಅಥವಾ ಸಮಾಧಾನಕ್ಕಾಗಿಯೇ?)**
- **ಟೆಲಿಪತಿ – ಮಾನಸಿಕ ಸಂವಾದ ಮೂಲಕ ನಮ್ಮಜತೆ ಮಾತಾಡುವುದೇ ಹೆಚ್ಚಿನ ಬಗೆಯವು...**
- **ಇದನ್ನೆಲ್ಲಾ ನೋಡಿದರೆ ಅವರೆಲ್ಲರಿಗಿಂತಾ ನಾವೇ ವೈಜ್ಞಾನಿಕವಾಗಿಯೋ, ಬೌದ್ಧಿಕವಾಗಿಯೊ ಬಹಳ ಮಿಲಿಯನ್ ವರ್ಷಗಳೇ ಹಿಂದುಳಿದ್ದೇವಾ ಎಂಬ ಕೀಳರಿಮೆ ಬಂದರೂ ಬರಬಹುದು. ಇರಲಿ ಅದೆಲ್ಲಾ ನನ್ನ ಸಂಗ್ರಹದ ವೈಯಕ್ತಿಕ ಅಭಿಪ್ರಾಯ ಮಾತ್ರ...**

ಹೀಗೆ "**ಥರ್ಡ್ ಕೈಂಡ್ ಕ್ಲೋಸ್ ಎನ್ಕೌಂಟರ್**" ಆದವರ ಮೂಲ ಹೇಳಿಕೆಗಳಲ್ಲಿ ಕಾಣುವ, common thread/ ಸಾಮಾನ್ಯವಾಗಿ ಹೀಗಿದೆ :-

1. ಇದ್ದಕ್ಕಿದ್ದಂತೆ ನಾನು ರಸ್ತೆಯಲ್ಲಿದ್ದಾಗ/ ಮನೆಯಲ್ಲಿದ್ದಾಗ ಆ ಗಗನನೌಕೆ ಬಂದು ನಿಂತು ಅವರು ಇಳಿದರು, ನನ್ನತ್ತ ತಿರುಗಿ ಟೆಲಿಪತಿ (ಮಾನಸಿಕ ಸಂವಾದ, ಯಾವುದೇ ಭಾಷೆಯಲ್ಲ) ಯಲ್ಲಿ –" ಭಯ ಪಡಬೇಡಿ, ನಾವು ನಿಮ್ಮ ಸ್ನೇಹಿತರು, ನಿಮ್ಮ ಜತೆ ಸ್ವಲ್ಪ ಕೆಲಸವಿದೆ..ಕೆಲವು ಪರೀಕ್ಷೆಗಳನ್ನು ಮಾಡುವುದಿದೆ ಅಥವಾ ಕೆಲವು ಸಂದೇಶಗಳನ್ನು ನಿಮ್ಮ ಮೂಲಕ ನಿಮ್ಮ ಭೂಮಿಗೆ ಕಳಿಸಲು ನಿಮ್ಮನ್ನು ದೂತನಂತೆ ಬಳಸುತ್ತಿದ್ದೇವೆ" ಎಂದು ಹೇಳಿ ನಮ್ಮನ್ನು ಬೆಳಕಿನ ಮಿಂಚು ಇತ್ಯಾದಿ ಯಂತ್ರದ ಪಿಸ್ತೂಲಿನಿಂದ ಕಿರಣಗಳನ್ನು ಹೊಮ್ಮಿಸಿ ಹೇಗೋ ಮೂರ್ಛೆ ಬೀಳಿಸುತ್ತಾರೆ.
2. ಇವರು ಕೆಲವೊಮ್ಮೆ ನೋಡಲು –"ಬೂದಿ ಬಣ್ಣದ 4 ಅಡಿ ಮೀರದ ಕುಳ್ಳರಂತಿದ್ದು ದೊಡ್ಡ ಮೊಟ್ಟೆಯಾಕಾರದ ತಲೆ, ಗುಳಿಯಂತಾ ದೊಡ್ಡ ಕಣ್ಣುಗಳು, ನಾಲ್ಕು ಅಥವಾ ಐದು ಬೆರಳಿನ ಕೈಗಳಿರುತ್ತವೆ". ಇನ್ನು ಕೆಲವರು- "ಮಾನವಾಕಾರದಲ್ಲಿ ವ್ಯತ್ಯಾಸವುಳ್ಳ 6, 7, 8 ಅಡಿ ಎತ್ತರದ ಬಿಳಿಯರಂತಿದ್ದರು". ಇನ್ನೂ ಕೆಲವರು

ಹೋಲೋಗ್ರಾಮ್ ಮುಖಾಂತರ ಮಾತ್ರ ಛಾಯೆಯಂತೆ ಸೂಕ್ಷ್ಮದೇಹದಂತೆ ಇದ್ದರು ಎಂದೆಲ್ಲಾ ವಿವಿಧ ವಿಚಿತ್ರ ವರ್ಣನೆಗಳೂ ಬಂದಿವೆ.

3. ನಾವು ಮತ್ತೆ ಎದ್ದಾಗ ವಿಚಿತ್ರವಾದ ಗೋಡೆಗಳಿರುವ ಬಾಹ್ಯಾಕಾಶ ನೌಕೆಯಲ್ಲಿರುತ್ತೇವೆ. ಮಲಗಿರುತ್ತೇವೆ. ಇಲ್ಲವೆ ಯಾರೋ ಕೈಹಿಡಿದು ಬಲವಂತದಿಂದ ಅಥವಾ ಒತ್ತಾಯದಿಂದ 'ಭಯಪಡಬೇಡಿ ' ಎನ್ನುತ್ತಲೇ ಗಾಳಿಯಲ್ಲಿ ಹಾರಿಸಿದಂತೆ ಇಲ್ಲವೇ ನೆಲದ ಮೇಲೆಯೇ ತೇಲುವಂತೆ ಒಯ್ದು ಒಂದು ಪ್ರಯೋಗಾಲಯದ ಮೇಜಿಗೆ ಕರೆದೊಯ್ಯುತ್ತಾರೆ.
4. "ನೀವು ಯಾರು, ಏನು ಎತ್ತ?" ಎಂದು ನಮ್ಮವರು ವಿಚಾರಿಸಿದಾಗ, `ನಾವು ಮಾತಾಡಿದ್ದನ್ನು ಅವರು ತಕ್ಷಣ ಗ್ರಹಿಸಬಲ್ಲವರು, ನಮ್ಮ ಯೋಚನೆಗಳನ್ನೇ ಥಕ್ಕನೆ ಹಿಡಿದು,- (ಕೆಲವರಿಗೆ) ಯಾವುದೋ ಹೊಸ ಗೆಲಾಕ್ಸಿಯ ಭೂಪಟ ತೋರಿಸಿ ಇದನ್ನು ಜೀಟಾ ರೆಟಿಕ್ಯುಲಿ, ಟೋರಸ್ ಮಂಡಲ, ನೆಪ್ಚೂನ್ ಬಳಿಯದು- ಇತ್ಯಾದಿ ನಮ್ಮ ಖಗೋಲದ ಹೆಸರಿನಿಂದ ತೋರಿಸುತ್ತಾ ನಾವು ಅಂತರಿಕ್ಷದ **ವಿಸ್ಮಯಗಳಲ್ಲೊಂದಾದ ವರ್ಮ್ ಹೋಲ್ (ಹುಳು ಹಾದಿ) ಪ್ರಯಾಣ ಮಾಡಿ ಯಾವುದೇ ಕಾಲದ ಪ್ರತಿಬಂಧವಿಲ್ಲದೇ ನಿರಾಯಾಸವಾಗಿ ಲಕ್ಷಾಂತರ ಜ್ಯೋತಿವರ್ಷಗಳನ್ನು ಬಹಳ ಕಡಿಮೆ ಅವಧಿಯಲ್ಲಿ ದಾಟಬಲ್ಲೆವು. ಇದಕ್ಕೆ ಸ್ಪೇಸ್-ಟೈಮ್- ವಾರ್ಪ್ ಪ್ರಯಾಣ ಎಂದೂ ಎನ್ನುತ್ತಾರೆ**. ( ಇದನ್ನು ಮುಂದಿನ ಅಧ್ಯಾಯಗಳಲ್ಲಿ ವಿವರಿಸುವೆ)' ಎಂದು ವಿವರಿಸಿಯೂ ಇದ್ದಾರೆ. ಕೆಲವೊಮ್ಮೆ "ನಿಮಗೆ ಹೇಳಿದರೆ ಅರ್ಥವಾಗುವಂತಾ ಬೆಳವಣಿಗೆಯಾಗಿಲ್ಲ, ನೀವು ಅದನ್ನೆಲ್ಲಾ ಅರ್ಥ ಮಾಡಿಕೊಳ್ಳಲಾರಿರಿ, ಬಿಡಿ" ಎಂದು ಕೇಳಿದವರನ್ನು ಸುಮ್ಮನಾಗಿಸಿದ್ದೂ ಇದೆ.

5. **ಜೀಟಾ ರೆಟಿಕ್ಯುಲಿ** ಎಂಬ 40 ಜ್ಯೋತಿವರ್ಷಗಳ ದೂರದ ಸೌರವ್ಯೂಹದಲ್ಲಿ ಎರಡು ಸೂರ್ಯಗಳಿವೆ...ಅದರ ಬಗ್ಗೆ ನಮಗೆ (ಭೂಮಿಯಲ್ಲಿ ವಿಜ್ಞಾನಿಗಳಿಗೆ) ತಿಳಿದಿದೆ. "ಅಲ್ಲಿ ನಾವಿದ್ದೇವೆ, ಅಲ್ಲಿಂದ ಇಲ್ಲಿಗೆ ಬರಲು ನಮಗೆ ಗೊತ್ತಿದೆ, ಸಾವಿರಾರು ವರ್ಷಗಳಿಂದ ಇಲ್ಲಿಗೆ ಬಂದು ಹೋಗುತ್ತಿರುತ್ತೇವೆ" ಎನ್ನುತ್ತಾ ಅವರು ಕೆಲವರು ಅಪಹೃತರಿಗೆ ಅಲ್ಲಿನ ನಕ್ಷೆ/ಮ್ಯಾಪನ್ನು ತೋರಿಸುತ್ತಾರೆ. ಆ ಅಪಹೃತರು ಅಂತಾ ಗ್ರಹಮಂಡಲವನ್ನು ಬಲ್ಲದವರು, ಜನಸಾಮಾನ್ಯರು; ಆನಂತರ ವಿಚಾರಣೆಯಲ್ಲಿ ಅದೆಲ್ಲಾ ತಜ್ಞರಿಗೆ ಕೈಯಲ್ಲಿ ಚಿತ್ರ ಬರೆದು "ಇದು ನಿಜವೆ?" ಎಂದು ಕೇಳಿದಾಗ ಅವರೇ ಅದು ನಿಜವೆಂದು ಖಚಿತಪಡಿಸಿ ಈ ಘಟನೆಗಳನ್ನು ನಂಬಲೇಬೇಕಾಗದಂತಾ ಘಟನೆಗಳಿವೆ.
6. "ನಾವು ಲಕ್ಷಾಂತರ ವರ್ಷಗಳಿಂದ ಇದ್ದೇವೆ...ಯುಗಯುಗಗಳು ನಮಗೂ ಸಾಗಿಹೋಗಿವೆ. ಅಲ್ಲಿಯೂ ಸೃಷ್ಟಿ-ಪ್ರಳಯ/ ವಿನಾಶ ಮತ್ತು ಮರುಸೃಷ್ಟಿ ಹೀಗೆ ಕಾಲಚಕ್ರ ಸುತ್ತುತ್ತಲೇ ಇರುತ್ತದೆ. ಆದರೆ ನಮ್ಮ ಸಮಯದ ಗಣನೆಯೇ ಬೇರೆ, ಅಲ್ಲಿನ ಹವಾ, ಜೀವಿಸಲು ಬೇಕಾದ ಸಂಪನ್ಮೂಲಗಳು, ಹಗಲು ರಾತ್ರಿಗಳು, ಜನಜೀವನ ಇಲ್ಲವೆ ಸಮಾಜ, ಅಧಿಕಾರ/ ಸರಕಾರವೇ ಎಲ್ಲವು ಇಲ್ಲಿಗಿಂತ ಬಹಳ ಬಹಳ ಬೇರೆ ತರಹ..." ಎಂದಿರುತ್ತಾರೆ.

**7.** ಇವರಲ್ಲಿ ಕೆಲವರು ವೈಜ್ಞಾನಿಕವಾಗಿ "ಲಕ್ಷಾಂತರ ವರುಷಗಳಲ್ಲಿ ನಾವು ಬಹಳ ದೊಡ್ಡ ಪ್ರಗತಿ ಸಾಧಿಸಿ ಮುಂದೆ ಹೋಗಿದ್ದೇವೆಂದರೆ", ಮಿಕ್ಕವರೂ ಅದರೊಂದಿಗೆ "ನಾವು ಮೊದಲಿದ್ದ ಆರೋಗ್ಯಕರ ಹವಾ, ನೀರು, ಪ್ರಕೃತಿಯನ್ನೂ ಕಳೆದುಕೊಂಡೆವು, ನಮ್ಮ ವಾತಾವರಣದ ಸಂಪನ್ಮೂಲಗಳೆಲ್ಲಾ ಖಾಲಿಯಾಗುತ್ತಿವೆ" ಎಂದು ಪೇಚಾಡಿದ್ದೂ ಉಂಟು. 'ನಾವೀಗ ನಿಮ್ಮನ್ನು ನೋಡಿ ನಿಮ್ಮ ಭೂಮಿಯಂತಾ ಆರೋಗ್ಯಕರ ಗ್ರಹವನ್ನು ಕಂಡು ಅದರಂತೆ ಮಾಡೆಲ್ ಮಾಡಿ ಇರಬಯಸುತ್ತೇವೆ' ಎಂದು ಬೂದು ಬಣ್ಣದ ಈ ಗ್ರೇಯ್ಸ್ ಜೀವಿಗಳು ಹೇಳಿದರೆ, ಮಿಕ್ಕ ಕೆಲವು ಮಾನವರೂಪಿ ಅನ್ಯಗ್ರಹವಾಸಿಗಳು ಇದಕ್ಕೆ ವಿರೋಧವಾಗಿ- ತಾವು ಬಹಳ ಅಭಿವೃದ್ಧಿ ಹೊಂದಿ ಚೆನ್ನಾಗಿದ್ದೇವೆಂದೂ, ನಮ್ಮ

ಭೂಮಿಯ ಬಗ್ಗೆ ಎಚ್ಚರಿಕೆ ಸಹಾ ಕೊಟ್ಟಿದ್ದು- "ನೀವು ವೈಜ್ಞಾನಿಕವಾಗಿ ಮುಂದುವರೆದರೂ ಇನ್ನೂ ಒಗ್ಗಟ್ಟಿಲ್ಲದೇ ದೇಶ ವಿದೇಶಗಳಾಗಿ, ಶತ್ರುಗಳಾಗಿ ಪ್ರತ್ಯೇಕವಾಗಿ ಅಸ್ತ್ರ ಶಸ್ತ್ರಗಳನ್ನು ಪೇರಿಸಿ, ಸದಾ ಪೈಪೋಟಿ, ಕೈ ಕೈ ಮಿಲಾಯಿಸಲು, ಕೊಲ್ಲಲು, ರಕ್ತಪಾತ ಮಾಡಲು ಯೋಚಿಸುತ್ತಿದ್ದೀರಿ. ಮಾನಸಿಕವಾಗಿ, ಬೌದ್ಧಿಕವಾಗಿ, ಆಧ್ಯಾತ್ಮಿಕವಾಗಿ (ಸ್ಪಿರಿಚುಯಲ್ ಡೆವಲಪ್‌ಮೆಂಟ್) ನಿಮ್ಮ ವಿಜ್ಞಾನದ ಗತಿಗೆ ತಕ್ಕಂತೆ ಆಗುತ್ತಿಲ್ಲ...ಹಾಗಾಗಿ ನಿಮ್ಮ ಗ್ರಹದ ವಾತಾವರಣವನ್ನು ಲೆಕ್ಕವಿಲ್ಲದೇ ಮಲಿನಗೊಳಿಸುತ್ತಿದ್ದೀರಿ. ಬೇಗ ಈ ಭೂಮಿ ಹಾಳಾಗಿ ಹೋದರೆ, ಮುಂದಿನ ಪೀಳಿಗೆಗೆ, ನಿಮ್ಮ ಭವಿಷ್ಯವೇನು?, ಮೊದಲು ನಿಮ್ಮ ವರ್ತನೆ ಮತ್ತು ಉದ್ದಿಶ್ಯವನ್ನು ಬದಲಾಯಿಸಿ ನಿಮ್ಮ ಗ್ರಹದಲ್ಲಿ ಎಲ್ಲರೊಂದಿಗೆ ಶಾಂತಿಪ್ರಿಯರಾಗಿ ಸಹಯೋಗದಿಂದ ಬಾಳಿದರೆ ನಾವೂ ಸಹಾಯ ಮಾಡಲು ಸಿದ್ಧ, ಇಲ್ಲವೇ ಇಲ್ಲ' ಎಂದು ಎಚ್ಚರಿಸಲು ಬಂದಿದ್ದೇವೆ" ಎನ್ನುತ್ತಾರೆ. 'ಅಣುಬಾಂಬ್ , ಪರಮಾಣು/ ಹೈಡ್ರೋಜೆನ್ ಬಾಂಬ್ ತಯಾರು ಮಾಡಬೇಡಿ...ಎಲ್ಲರೂ ಒಂದಿನ ಇದರಿಂದ ಮಣ್ಣಲ್ಲಿ ಮಣ್ಣಾಗಿ ಹೋಗುವಿರಿ, ಇಡೀ ಸುತ್ತಮುತ್ತಲಿನ ವಿಶ್ವವನ್ನೂ ಅಣುವಿಕಿರಣದಿಂದ ಹಾಳು ಮಾಡುವಿರಿ, ಇದನ್ನು ನಿಲ್ಲಿಸಬೇಕು' ಎಂದವರೂ ಇದ್ದಾರೆ**. ಹೀಗೆ ಇವರೆಲ್ಲರೂ ಒಂದೇ ಬಗೆಯವರಲ್ಲ, ಒಂದೇ ಕಾರಣಕ್ಕೆ ಬಂದಿಲ್ಲ ಎನಿಸುತ್ತದೆ**

8. ಮುಕ್ಕಾಲುವಾಸಿ ಅವರು ನಮ್ಮನ್ನು ಮೇಜಿನ ಮೇಲೆ ಮಲಗಿಸಿ ನಮ್ಮ ಮೈಯಿಂದ ಕೆಲವೊಮ್ಮೆ ನೋವಿಲ್ಲದಂತೆ, ಕೆಲವೊಮ್ಮೆ ಸ್ವಲ್ಪ ನೋವಾಗುವಂತೆ ಬೆವರು, ಚರ್ಮ, ಉಗುರು, ಕೂದಲು, ರಕ್ತ, ವೀರ್ಯ ಅಥವಾ ಅಂಡಾಶಯದ ಸ್ಯಾಂಪಲ್ ತೆಗೆಯುತ್ತಾರೆ. ಅದನ್ನು ಜೋಪಾನವಾಗಿ ಕಾಯ್ದಿರಿಸುತ್ತಾರೆ. ಅವರು ಮಿಶ್ರತಳಿ ಜೈವಿಕ ಪ್ರಯೋಗಗಳನ್ನೆಲ್ಲಾ ಮಾಡಬಲ್ಲವರಾಗಿದ್ದಾರೆ. ಅವರು ತಮ್ಮನ್ನು ತಾವೇ ಕ್ಲೋನ್ ಮಾಡಿ ಹುಟ್ಟಿಸಿಕೊಳ್ಳಬಲ್ಲರು. ಸಂತಾನದ ಬೇರೆ ಮಾರ್ಗವನ್ನು ಅವರೀಗ ನಮ್ಮ ಮೂಲಕ ಕಂಡುಹಿಡಿಯುತ್ತಾರೆನ್ನುತ್ತಾರೆ .




**Zeta Reticuli Map**

9. ನಾವು ಎದ್ದಾಗ ಮೊದಲಿದ್ದಲ್ಲೇ ಬಿದ್ದು ಎಚ್ಚರವಾಗುತ್ತದೆ... ಆದರೆ ಭೂಮಿಯಲ್ಲಿ, ಹಲವಾರು ಗಂಟೆಗಳೇ ಸರಿದುಹೋಗಿರುತ್ತವೆ..ಆದರೆ ನಮಗೆ ನಾವು ಹೋಗಿಬಂದ ಅನುಭೂತಿ ಕೇವಲ ಕೆಲವೇ ನಿಮಿಷಗಳು ಎಂದು ಭಾವನೆ ಬರುತ್ತದೆ.
10. ಬಹಳ ಕೇಸುಗಳಲ್ಲಿ ವಾಪಸಾದಾಗ -ಎಲ್ಲಿಯೋ ತಾವಿದ್ದುದಕಿಂತಾ ದೂರದಲ್ಲಿ ಮತ್ತೆ ತಮ್ಮನ್ನು ತಾವು ಪಡೆಯುತಾರೆ. ನಿಶ್ಶಕ್ತಿ, ಆಯಾಸ  ಇತ್ಯಾದಿ ಆದಂತೆ ಕಾಣುತ್ತದೆ.

**ಹೀಗೆ , ಓದುಗರೇ, ನೋಡಿ... ಇವೆಲ್ಲಾ ಬಹಳ ನಂಬಲಸಾಧ್ಯವಾದ ವಿಚಿತ್ರವಾದ ರೀತಿಯ ವರ್ಣನೆಗಳು. ಅವರನ್ನು ಕಂಡು ಮಾತಾಡಿಸಿದವರು, ಮನೆಯವರು, ಗೆಳೆಯರು 'ಇವರು ಯಾವುದೋ ಮಾನಸಿಕ ಒತ್ತಡದಲ್ಲಿದ್ದಾರೆಂದೋ, ಡಿಪ್ರೆಶನ್ / ಖಿನ್ನತೆ ಆಗಿದೆಯೆಂದೋ ಅಥವಾ ಹುಚ್ಚೇ ಹಿಡಿದಿರಬೇಕು...ಅಥವಾ ಹುಚ್ಚುಚ್ಚು ತೆವಲು ಕನಸು ಕಂಡರೋ,'  ಎಂದು ಭಾವಿಸುತ್ತಾರೆ ಸಾಮಾನ್ಯವಾಗಿ. ಯಾಕೆಂದರೆ ಅವರಿಗೆ ಅಂತಾ ಅನುಭವ ಯೋಚಿಸಲಸಾಧ್ಯ, ಹಾಗಾಗಿ...**
**ಹಲವರನ್ನು ಮಾನಸಿಕ ತಜ್ಞರು ಪರೀಕ್ಷಿಸಿ ಹಿಪ್ನೋಟೈಸ್ ಮಾಡಿ ಸಮ್ಮೋಹನವಾದಾಗ ಕೇಳಿ ಕೇಳಿ ಸತ್ಯವನ್ನು ಹೊರಗಳೆದಿದ್ದಾರೆ. ಅಂತಾ ಮನಃಶಾಸ್ತ್ರ ವೈದ್ಯರ ಹಲವು ಪುಸ್ತಕಗಳೇ ಮಾರುಕಟ್ಟೆಯಲ್ಲಿವೆ. ಇನ್ನು ಕೆಲವು ಸರಕಾರಿ ವೈದ್ಯರು, ಪ್ರೊಜೆಕ್ಟ್ ಬ್ಲೂ ಬುಕ್, CUFOS, MUFON, SETI ಇತ್ಯಾದಿ ಖಾಸಗಿ ತಜ್ಞ ಸಂಸ್ಥೆಗಳ ಈ ವಿವರಗಳು, ದಾಖಲೆಗಳೂ ಇವೆ.**

ಇದರಲ್ಲಿ ನಿಮ್ಮ ಆಸಕ್ತಿಗಾಗಿ ಕೆಲವನ್ನು ಮಾತ್ರ ಕೆಳಕಂಡಂತೆ ಉದಹರಿಸಿದ್ದೇನೆ.

**ಅಮೆರಿಕನ್ ಸರಕಾರ / ಮಿಲಿಟರಿಯವರ ದಾಖಲೆಯಲ್ಲಿನ ಕೇಸು:**

1. **ವ್ಯಾಲಿಯೆಂಟ್ ಥೋರ್ ಎಂಬ ಅನ್ಯಗ್ರಹ ಜೀವಿ ಅಮೇರಿಕನ್ ಅಧ್ಯಕ್ಷರನ್ನೇ ಭೇಟಿ ಮಾಡಿದ್ದು:**
   (Dr. Frank Stranges -His best selling work '**Stranger at the Pentagon**' which was first published in 1967)
   https://www.disclose.tv/valiant-thor-the-benevolent-alien-with-an-iq-of-1200-307285
   https://youtu.be/dtiTf9bKHuM - **ಮಿಲಿಟರಿ ಅಧಿಕಾರಿಗಳ ಒಪ್ಪಿಗೆ ಇದೆ; ಈ ಡಾಕ್ಯುಮೆಂಟರಿಯಲ್ಲಿ ಯುಟ್ಯೂಬಿನ್ನಲಿದೆ.**

   https://www.imdb.com/title/tt2645374/- **ಇದರ ಬಗ್ಗೆ 2013ರಲ್ಲಿ ಚಲನಚಿತ್ರ ಬಂದಿದೆ**..




ಇಲ್ಲೊಂದು ನಂಬಲೇ ಅಸಾಧ್ಯವಾದ ಆದರೆ ದಾಖಲೆಯಲ್ಲಿರುವ ಅನ್ಯಗ್ರಹ ಜೀವಿಯು ಅಮೆರಿಕದಲ್ಲಿ ಸರಕಾರದ ಜತೆ ಅಲ್ಲಿನವರ ರಾಯಭಾರಿಯಂತೆ ಚರ್ಚೆಮಾಡಿದ್ದರ ಉಲ್ಲೇಖವಿದೆ.

ಶುಕ್ರಗ್ರಹದಿಂದ ಬಂದು ಮೂರು ವರ್ಷಕಾಲ ಅಮೇರಿಕನ್ ಸರಕಾರದ ಅತಿಥಿಯ್ಯಾಗಿದ್ದ ವ್ಯಾಲಿಯೆಂಟ್ ಥೋರ್ ಬಗ್ಗೆ ಹಲವು ವ್ಯಾಖ್ಯಾನಗಳಿವೆ. ಜನಪ್ರಿಯವಾದ ಒಂದು ವ್ಯಾಖ್ಯಾನ **ಪ್ರೊಜೆಕ್ಟ್ ಬ್ಲೂ ಬುಕ್ಕಿಗೆ** ಸಂಬಂಧಿಸಿದಂತೆ ಇಲ್ಲಿದೆ:

- 1957 ರಲ್ಲಿ ಥೋರ್ ಮತ್ತು ಅವನ ಜತೆಗಾತಿ ಜಿಲ್ ಎಂಬವರು ಮಾರ್ಚ್ 16ರಂದು ವರ್ಜೀನಿಯಾ ರಾಜ್ಯದ ಫೀಲ್ಡಿನಲ್ಲಿ ತಮ್ಮ ನೌಕೆಯಿಂದಿಳಿಯುತ್ತಾರೆ. ಅಲ್ಲಿನ ರೈತರು ನೋಡಿ ಅಚ್ಚರಿಪಡುತ್ತಾರೆ ಈ ಮಾನವರೂಪಿಗಳನ್ನು.
- ಅವರನ್ನು ಪೋಲಿಸರು ಬಂಧಿಸಲು ಬಂದಾಗ ನಾವು ಅಮೆರಿಕನ್ ಪ್ರೆಸಿಡೆಂಟರನ್ನು ನೋಡಬೇಕು ಎಂದರಂತೆ.
- ಸೆಕ್ರೆಟರಿ ಆಪ್ ಡಿಫೆನ್ಸ್- ನೀಲ್ ಮೆಕೆಲ್ರಾಯ್ ಅವರನ್ನು ಭೇಟಿ ಮಾಡಿದಾಗ, ಅವರನ್ನು ಗುಪ್ತವಾಗಿ ವಾಷಿಂಗ್ಟನ್ ಡಿಸಿಯ ವೈಟ್ ಹೌಸಿಗೆ ಕರೆದೊಯ್ಯುತ್ತಾರೆ.
- ಅಲ್ಲಿ ಆಗಿನ ಅಧ್ಯಕ್ಷ ಐಸೆನ್ ಹೋವರ್ ಮತ್ತು ಉಪಾಧ್ಯಕ್ಷ ರಿಚರ್ಡ್ ನಿಕ್ಸನ್ ಅವರನ್ನು  ಜಾಯಿಂಟ್ ಚೀಫ್ಸ್ ಆಫ್ ಸ್ಟಾಫ್ ಜತೆ ಭೇಟಿ ಮಾಡಲಾಗುತ್ತದೆ.
- ಪ್ರಾಜೆಕ್ಟ್ ಬ್ಲೂ ಬುಕ್ಕಿನ ಅಧಿಕಾರಿ ಕಮಾಂಡರ್ ಜೇಮ್ಸ್ ಪ್ರೊಜೆಕ್ಟ್ ಬ್ಲೂ ಬುಕ್ಕಿನ ಸೆಕ್ಯುರಿಟಿ ಅಧಿಕಾರಿ ಕ್ಲಿಯರ್ ಮಾಡಿರುತ್ತಾರೆ
- ಅವರು ಅಧ್ಯಕ್ಷರ ಭೇಟಿಯಲ್ಲಿ" ನಾವು ವೀನಸ್ –ಶುಕ್ರಗ್ರಹದಲ್ಲಿ "ನೆಲದ ಕೆಳಗೆ"( ಅಂಡರ್ಗ್ರೌಂಡ್) ಲೋಕವನ್ನು ಕಟ್ಟಿದ್ದೇವೆ, ನಾವು ಅಸ್ಟ್ರಲ್ ಪ್ಲೇನ್ ನಲ್ಲಿರುವವರು (ಸೂಕ್ಷ್ಮ ದೇಹಿಗಳು), ಅಲ್ಲಿಂದ ಬೆಳವಣಿಗೆಯಲ್ಲಿ ಕೆಳಗಿಳಿದು ನಿಮ್ಮ ಕಂಗಳಿಗೆ ಕಾಣುವಂತೆ "ಇಂತಾ" ಮಾನವ ದೇಹವನ್ನು

ಧರಿಸಿದ್ದೇವೆ. ಹಲವಾರು ಗ್ರಹದಲ್ಲಿ ಆಯಾ ಗ್ರಹದ ನೆಲದ ಮೇಲೆ ಯಾರೂ ಕಾಣದಿರುವುದು ಇದಕ್ಕೇ, ಬೇರೆಯೇ ಡೈಮೆನ್ಶನ್ಸ್ ( 3-ಕ್ಕಿಂತಲೂ ಹೆಚ್ಚಿನ ಆಯಾಮ) ನಲ್ಲಿರುತ್ತಾರೆ...

- ನಾವು ಅಂತರಿಕ್ಷದ " ಇಂಟರ್ ಗೆಲಾಕ್ಟಿಕ್" ಹೈ ಕೌನ್ಸಿಲ್ " ಎಂಬುದರ ರಾಯಭಾರಿಗಳು. ನಮಗೆ ಭೂಮಿಯ ಅಣ್ವಸ್ತ್ರದ ಬಗ್ಗೆ ಹೆಚ್ಚು ಚಿಂತೆಯಾಗಿದೆ. ಅದು ನಿಮ್ಮ ಗ್ರಹವನ್ನು ಸಮೂಹ ಸ್ಮಶಾನವಾಗಿಸಬಲ್ಲುದು, ಇಡೀ ಮಾನವತೆಗೆ ಭಯಂಕರ ಪರಿಣಾಮ , ಭವಿಷ್ಯ ಕೊಡುವಂತದು, ಅಲ್ಲದೇ ನಮ್ಮ ಇಡೀ ವಿಶ್ವಕ್ಕೇ ಇದು ಹಾನಿಕಾರಕ ಎಂದು ಭಾವಿಸುತ್ತೇವೆ
- ನಿಮ್ಮ ಭೂಮಂಡಲದ ಸುತ್ತಲೂ ನಾವು ಕಾವಲಿದ್ದೇವೆ, ನಮ್ಮ 200ಕ್ಕೂ ಹೆಚ್ಚು Victor One ನೌಕೆಗಳು ಅಲ್ಲಿಂದ ನಿಮ್ಮನ್ನು ನೋಡುತ್ತಿವೆ, ಜೋಕೆ!.
- ಹೀಗೆ ತನ್ನ ಮಿಷನ್ನಿಗಾಗಿ ಮೂರು ವರ್ಷ ಕಾಲ ಸಾಮಾನ್ಯ ತಜ್ಞನಂತೆಯೇ ವರ್ತಿಸುತ್ತಿದ್ದ ಥೋರ್ ಮತ್ತು ಜಿಲ್ ವಿಶ್ವದ ರಾಜಕೀಯ, ಸಮರ ಮುಂತಾದುದರ ಬಗ್ಗೆ ತಿಳಿಹೇಳುತ್ತಲೇ ಇದ್ದರಂತೆ. ಪ್ರೆಸಿಡೆಂಟ್ ಐಸೆನ್ಹೋವರ್ ಇದೆಲ್ಲದರ ಬಗ್ಗೆ ಸಾರ್ವಜನಿಕವಾಗಿ ಘೋಷಣೆ ಮಾಡೋಣವೆಂದಾಗ ಉಪಾಧ್ಯಕ್ಷ ನಿಕ್ಸನ್ ಮತ್ತು ಸೇನಾಧಿಕಾರಿಗಳು ವಿರೋಧಿಸಿ, ಅಮೇರಿಕಾದ ರಾಜಕೀಯ ಹಾಗೂ ಸಮರ ಪ್ರಾಬಲ್ಯಕ್ಕೆ, ಸ್ಥಾನಮಾನಕ್ಕೆ ಇದು ಧಕ್ಕೆಯಾಗುವುದು ಎಂದು ನಿಲ್ಲಿಸಿದರಂತೆ.
- ಇದನ್ನೆಲ್ಲಾ ಫ್ರಾಂಕ್ ಸ್ಟ್ರೇಂಜಸ್, ಫೆಡೆರಲ್ ಮಾರ್ಶಲ್ ಎಂಬ ರಕ್ಷಣಾಧಿಕಾರಿ ಆಗ ಪೆಂಟಗನ್ನಿನ ಕ್ಲಿಯರೆನ್ಸ್ ಇದ್ದವನು ತನ್ನ ಪುಸ್ತಕದಲ್ಲಿ ಬಹಿರಂಗಪಡಿಸಿದ್ದಾನೆ.
- ಅಮೇರಿಕಾದ ಮಿಲಿಟರಿ ದಾಖಲೆಯಲ್ಲಿರುವ ಮೊದಲ ಕೇಸು ಇದಾಗಿದೆ

**ಸಾರ್ವಜನಿಕರ ಕೇಸುಗಳು:**

**2. ದಿ ಮೆಡಿಸಿನ್ ಬೋ ಫಾರೆಸ್ಟ್ ಭೇಟಿ : ಅಕ್ಟೋಬರ್ 25, 1974: ವ್ಯೋಮಿಂಗ್ ರಾಜ್ಯ, ಯು ಎಸ್ ಎ**

ಇದರ ವರದಿಯನ್ನು ಬರೆದು ಸಹಿ ಹಾಕಿದ್ದಾರೆ: Dr. Leo Sprinkle, Professor of Psychology, University of Wyoming. Also included were Rick Kenyon, and Robert Nantkes, MUFON field investigators, and Frank Bourke, National Star Investigator.

*ಅಂದು ಕಾರ್ಲ್ ಹಿಗ್ಗನ್ ಎಂಬ ಬೇಟೆಗಾರ ಅಲ್ಲಿ ಜಿಂಕೆ ಬೇಟೆಯಾಡಹೊರಟಿದ್ದನು ತನ್ನ ಟ್ರಕ್ಕಿನಿಂದಿಳಿದು ಹತ್ತಿರದಲ್ಲೇ ಅವನು ಗನ್ ತೆಗೆದು ಪ್ರಾಣಿಯತ್ತ ಶೂಟ್ ಮಾಡಿದಾಗ ವಿಚಿತ್ರ ಪವಾಡವಾಯಿತು. ಆ ಬುಲೆಟ್ ನಿಧಾನಗತಿಯಲ್ಲಿ ಸಿನೆಮಾದ ಸ್ಲೋ ಮೋಶನ್ ರೀತಿಯಲ್ಲಿ ಬೇರೇಯೇ ಆಯಾಮ (dimension) ಗೆ ಹೋದಂತೆ ಗಾಳಿಯಲ್ಲಿ 50 ಅಡಿ ಚಲಿಸಿ ನೆಲಕ್ಕೆ ಟಪ್ಪನೆ ಬಿದ್ದು ಹೋಯಿತು. ಅವನು ಹೋಗಿ ಆ ಗುಂಡನ್ನು ಹೆಕ್ಕಿಕೊಳ್ಳುತ್ತಿದ್ದಾಗ ವಿಚಿತ್ರ ಸ್ಪರ್ಷವಾದಂತಾಗಿ ತಿರುಗಿ ನೋಡಿದರೆ ಅಲ್ಲೊಬ್ಬ ಮನುಷ್ಯರೂಪಿ ಆದರೆ ಬೇರೆಯ ವ್ಯಕ್ತಿಯೊಬ್ಬ ನಿಂತಿದ್ದಾನೆ.*

*ಆರಡಿಗಿಂತಾ ಎತ್ತರವಿದ್ದು, ಕಪ್ಪನೆ ಸೂಟ್ ಮತ್ತು ದೊಡ್ಡ ಬೆಲ್ಟ್ ಧರಿಸಿದ್ದಾನೆ. ಅದರ ಮೇಲೆ ಹಳದಿ ಬಣ್ಣದ ಸ್ಟಾರ್ ಚಿತ್ರವಿದೆ. ನೀಳ ನಿಂತ ತಲೆಗೂದಲು, ಕಾಲುಗಳು ಗುಂಡಗೆ ನಿಂತಂತಿದೆ. ಕೈಯಲ್ಲಿ ಹಸ್ತವಿಲ್ಲ, ಚೂಪಾದ ಕೋಲಿನಂತಿದೆ. ಕಂಗಳ ಮೇಲೆ ಹುಬ್ಬಿಲ್ಲ.*



***ಸೂಚ್ಯ ಡ್ರಾಯಿಂಗ್!***

*"ನಿನಗೆ ಹಸಿವೆಯಾಗಿದೆಯೆ?" ಎಂದು ಕೇಳಿ ಅವನಿಗೆ ಔಷದಿಯಂತಾ ಪಿಲ್ಸ್ ಕೊಟ್ಟಿತಂತೆ. ಒಂದನ್ನು ತಿಂದರೆ ನಿನಗೆ 4 ದಿನವೆಲ್ಲಾ ಹಸಿವಾಗುವುದಿಲ್ಲ ಎಂದು ಹೇಳಿದನಾತ. ಹಸಿವೆಯಾಗದಿದ್ದರೆ ಜಿಂಕೆಯನ್ನು ಕೊಲ್ಲಲು ಬರುತ್ತಿರಲಿಲ್ಲ ಎಂದು ಊಹಿಸಿದ್ದಿರಬೇಕು. ಅಂತದೆಲ್ಲ ಎಂದೂ ತಿನ್ನದವನು ಹಿಗ್ದನ್ ವಿಚಿತ್ರವೆಂದೆನಿಸಿ ಒಂದನ್ನು ತಿಂದುಬಿಟ್ಟ. ಮಿಕ್ಕಿದ್ದನ್ನು ತೆಗೆದುಕೊಳ್ಳಲಿಲ್ಲ.*

*ಆತ ಇವನ ಟ್ರಕ್ಕಿನತ್ತ ಕೈ ತೋರಿಸಲು ಅದು ಇದ್ದಕ್ಕಿದ್ದಂತೇ ಅಲ್ಲಿಂದ ಮಾಯವಾಯಿತು*

*ಅವನು ಇವನತ್ತ ಕೈ ಚಾಚಿದ ಕೂಡಲೇ ಹಿಗ್ದನ್ ಯಾವುದೋ ಪಾರದರ್ಶಕವಾದ ಗಾಳಿಯಲ್ಲಿ ಹೋಗುವ ವಾಹನದಲ್ಲಿದ್ದ. ಅಲ್ಲಿ ಇವನ ತರಹ ಇನ್ನಿಬ್ಬರಿದ್ದರು...ಮತ್ತು ಐದು ಜಿಂಕೆಗಳು, ಇವನು ಬೇಟೆಯಾದಲು ಬಂದಾಗ ಕಂಡವು. . ಅವೆಲ್ಲಾ ಹೆಪ್ಪುಗಟ್ಟಿದಂತೆ ಮರಗಟ್ಟಿದಂತೆ ಕಂಡವು!*

*"ನನ್ನ ಹೆಸರು ಆಸೋ" ಎಂದನಂತೆ ಆತ. ಇನ್ನೇನೂ ಉತ್ತರಿಸಲಿಲ್ಲ.*

*" ನಾವೀಗ 1,63,000 ಜ್ಯೊತಿವರ್ಷದಲ್ಲಿರುವ ನಮ್ಮ ಗ್ರಹಕ್ಕೆ ಹೋಗುತ್ತಿದ್ದೇವೆ" ಆತ ಎಂದಾಗ ಆ ವಾಹನ ಚಲಿಸಿತಷ್ಟೇ. ತಕ್ಷಣ ಅವರು ಹೊಸ ಗ್ರಹಕ್ಕೆ ತಲುಪಿದ್ದರು.*

*ಅಲ್ಲಿಯೂ ಅಮೇರಿಕಾದ ಸಿಯಾಟಲ್ ನಗರದ "ಸ್ಕೈ ನೀಡಲ್" ನಂತಾ ಗಗನಚುಂಬಿ ಕಟ್ಟಡಗಳಿದ್ದವಂತೆ. ವಾಹನಗಳೆಲ್ಲಾ ಗಾಳಿಯಲ್ಲಿ ಹೋಗುತ್ತಿದ್ದವು. ಅಬ್ಬಾ ಅಲ್ಲಿನ ಸೂರ್ಯನ ಪ್ರಭೆ ಕಣ್ಣು ಕೋರೈಸುವಂತಿತ್ತು. ಅವನ ಕಂಗಳಲ್ಲಿ ತಡೆಯಲಾರದೇ ನೀರುಕ್ಕುವಷ್ಟು! ಅಲ್ಲಿಯೂ ಮಾನವ ರೂಪದ ಯುವಕ ಯುವತಿಯರು ಮಾತಾಡುತ್ತಾ ನಿಂತಿದ್ದಂತೆ ಕಾಣಿತು. ಅವರ್ಯಾರೂ ಇವನತ್ತ ತಿರುಗಿ ನೋಡಲೇ ಇಲ್ಲ!*

*ಅಲ್ಲಿ ಒಂದು ಎತ್ತರದ ಕಟ್ಟಡಕ್ಕೆ ಸುಯ್ಯನೆ ಹಾರುವ ಲಿಫ್ಟಿನಲ್ಲಿ ಕರೆದೊಯ್ದರು. ಅಲ್ಲಿ ನಡುವೆ ಸ್ಟೇಜ್ ಇದ್ದು ಸುತ್ತಲೂ ಕನ್ನಡಿಗಳಿದ್ದಂತೆ.. ಒಂದು ಕನ್ನಡಿ ಇವನ ಮುಂದೆ ಬರುವಂತೆ ಆಸೋ ಮಾಡಿದನು.ಅದು ಕೆಲವು ನಿಮಿಷ ಅವನನ್ನು ಸ್ಕ್ಯಾನ್ ಮಾಡಿತೋ ಏನೋ, ಮತ್ತೆ ಪಕ್ಕಕ್ಕೆ ಸರಿದುಹೋಯಿತು.*

*ಆಗ ಆಸೋ ಎದುರಿಗೆ ಬಂದು, "ಸಾರಿ, ನಿನ್ನಲ್ಲಿ ನಮಗೆ ಬೇಕಾದ ಗುಣ ಲಕ್ಷಣಗಳಿಲ್ಲ, ನಿನ್ನನ್ನು ವಾಪಸ್ ಬಿಡುತ್ತೇನೆ" ಎಂದು ಮತ್ತೆ ತನ್ನ ಕೈ ಎದುರಿಗೆ ಚಾಚಿದರೆ ಬಾಗಿಲು ತಾನಾಗಿಯೇ ತೆಗೆದುಕೊಂಡು ಇವರು ತೇಲುತ್ತಾ ವಾಪಸ್ ಗಗನನೌಕೆಯ ಬಳಿ ಬಂದಿದ್ದರಂತೆ.*

*ಅಲ್ಲಿ ಹಾಗೇ ನೋಡುತ್ತಿದ್ದಂತೇ ಅಲ್ಲಿಂದ ಹೊರಟ ವಾಹನ ಮತ್ತೆ ಮೆಡ್ಸಿನ್ ಬೋ ಕಾಡಿಗೆ ತಂದು ಬಿಟ್ಟಂತಾಗಿ ಅಲ್ಲಿ ತನ್ನ ಗಡಿಯಾದ ನೋಡಿದಾಗ 2.5 ಗಂಟೆ ಕಾಲ ಮುಗಿದಿತ್ತು ಎಂದು ಗೊತ್ತಾಯಿತು. ಅವನಿಗೆ ಈಗಾಗಲೇ ಬಹಳ ಗಾಬರಿ, ಸುಸ್ತು ಎಲ್ಲಾ ಆಗಿತ್ತು .*

*ಅವನ ಟ್ರಕ್ ವಾಹನವನ್ನು ಹುಡುಕಲಾಗಿ ಹೊರಟವನಿಗೆ ಅದು ಕಾಣದೇ ಆತಂಕದಿಂದ ಅಲ್ಲಿನ ಫಾರೆಸ್ಟ್ ಪ್ರದೇಶದ ಶೆರೀಫಿಗೆ ಹೇಗೋ ಫೋನ್ ಮಾಡಿ ಕರೆಸಿ, ಅವರ ಜತೆ ಹಿಂತಿರುಗಿದನು.*

*"ನನ್ನ ಜಿಂಕೆಗಳನ್ನು ಕದ್ದುಕೊಂಡು ಹೋದರು" ಎಂದು ಕನವರಿಸುತ್ತಿದ್ದನಂತೆ ಉದ್ವಿಗ್ನ ಹಿಗ್ದನ್. ಆಸ್ಪತ್ರೆಯಲ್ಲಿ ಚಿಕಿತ್ಸೆ ಮಾಡಲು ಹೋದಾಗ ಅವನ ರಕ್ತದಲ್ಲಿ ವಿಪರೀತವಾದ ಅಸಾಧಾರಣವಾದ ವಿಟಮಿನ್ ಅಂಶ ಇದ್ದುದು ಗೊತ್ತಾಯಿತಂತೆ. ಬಹುಶಃ ಆ ನಾಲ್ಕು ದಿನಕ್ಕಾಗುವ ಮಾತ್ರೆಯಿಂದಿರಬೇಕು!*

*ಅವನ ತಪ್ಪಿದ ಬುಲೆಟ್ ಕೂಡಾ ಪರೀಕ್ಷೆಗೆ ತೆಗೆದುಕೊಂಡರು. ಅದರ ಲೆದರ್ ಹೊಸಕವಚ ಮಾತ್ರ ಇದ್ದು ಪರೀಕ್ಷೆಯಲ್ಲಿ -"ಅದು ಬಹಳ ಗಟ್ಟಿಯಾದ ಗೋಡೆಯನ್ನು ಹೊಡೆದು ಅಪ್ಪಚ್ಚಿಯಾಗಿ ಕೆಳಗೆ ಬಿದ್ದಂತೆ ಚಪ್ಪಟೆಯಾಗಿದೆ, ಗಾಳಿಯಲ್ಲಿ ಮೆತ್ತಗೆ ಹಾರಿ ಟಪ್ಪನೆ ನೆಲಕ್ಕೆ ಬಿದ್ದರೆ ಹೀಗಾಗುತ್ತಿರವಿಲ್ಲ" ಎಂದರಂತೆ!!*

*ಆದರೆ ದೊಡ್ಡ ಟೆಲೆಫೋನ್ ಮೆಟಲ್ ಕಂಬವನ್ನು ತೂರಬಲ್ಲ 7 MM ಬುಲೆಟ್ ಆ ಕಾಡಿನಲ್ಲಿ ಏನನ್ನು ತಾನೇ ತಗುಲಿ ಹೀಗಾಗಿರಲು ಸಾಧ್ಯ? ಎಂದು ನಮಗೆ ಹೇಳಲು ಸಾಧ್ಯವಿಲ್ಲ ಎಂದರಂತೆ ಪ್ರಯೋಗಾಲಯದ ವಿಜ್ಞಾನಿಗಳು.*

*ಅವನ ಟ್ರಕ್ ಎಲ್ಲಿಯೋ ದೂರದಲ್ಲಿ ಕಾಡಿನಲ್ಲಿ ಮರಗಳ ನಡುವೆ ಸಿಕ್ಕಿತಂತೆ. ಅದನ್ನು ಅಲ್ಲಿಂದ ಹೊರಕ್ಕೆ ತರಲು ಅಧಿಕಾರಿಗಳಿಗೆ ಭಾರೀ ಕಷ್ಟವಾಯಿತಂತೆ..*

*ಇಲ್ಲಿಗೆ ಹೇಗೆ ತಾನೇ ಟ್ರಕ್ ತಂದು ನಿಲ್ಲಿಸಿದೆ ಎಂದು ಕೇಳಿದರಂತೆ. ಹಿಗ್ದನ್ ಮಾತನ್ನು ಅವರಿಗೆ ನಂಬಲಾಗಲಿಲ್ಲ..*

*ಅತ್ಯಂತ ಆಶ್ಚರ್ಯಕರ ಸಂಗತಿಯೆಂದರೆ **ಅವನ ಮೆಡಿಕಲ್ ಪರೀಕ್ಷೆಯಲ್ಲಿ ಅವನಿಗಿದ್ದ ಮೊದಲಿನ ಟಿ ಬಿ ಕರೆಗಳು ಶ್ವಾಸಕೋಶದಿಂದ ಕಾಣೆಯಾಗಿದ್ದವು..ಎಲ್ಲಾ ಅವನ ಈ ವಿಶೇಷ ಪ್ರಯಾಣ ಮತ್ತು ಅಲ್ಲಿ ನಡೆದ ಟೆಸ್ಟ್ ಗಳಿಂದ ಇರಬೇಕು ಎಂದುಕೊಂಡರಂತೆ.***

*ಕೊನೆಗೆ ಮೇಲೆ ಹೇಳಿದ ತಜ್ಞರೂ ವೈದ್ಯರೂ –" ಇವನು ಸುಳ್ಳು ಹೇಳಿದಂತೆ ಕಾಣುವುದಿಲ್ಲ, ಇಂತಾ ಘಟನೆಗಳು ಹೀಗೆ ಮಾತ್ರ ನಡೆದಿರಲು ಸಾಧ್ಯ" ಎಂದಿದ್ದಾರೆ.*

3. ***1982 ರಲ್ಲಿ ಆಲ್ಫ್ರೆಡ್ ಬರ್ಟೂ, ಹ್ಯಾಂಪ್ ಶೈರ್ ಗೆ ಆದ ಸಂಗತಿ:*** *77 ವರ್ಷ ವಯಸ್ಸಿನ ಆಲ್ಫ್ರೆಡ್ ಬರ್ಟೂ ಒಮ್ಮೆ ರಾತ್ರಿ ಹ್ಯಾಂಪ್ ಶೈರಿನ ಬಾಸ್ಕಿಂಗ್ ಸ್ಟೋಕ್ ಕೆನಾಲ್ ಎಂಬಲ್ಲಿ ಮೀನು ಹಿಡಿಯಲು ದಡಕ್ಕೆ ಬಂದಾಗ ಅಲ್ಲಿ ಆಗಸದಿಂದ ವಿಪರೀತ ಝುಗ್ಗೆನಿಸುವ ಗಗನನೌಕೆ ಸುಯ್ಯೆಂದು ಸದ್ದು ಮಾಡುತ್ತಾ ಬಂದಿತಂತೆ. ಅದರಿಂದ ಅವನ ಜತೆಯಿದ್ದ ನಾಯಿ ಉದ್ರೇಕದಿಂದ ಬೊಗಳತೊಡಗಿತಂತೆ. ಆಗ ಇಬ್ಬರು ನಾಲ್ಕು ಅಡಿ ಎತ್ತರದ ಹಸಿರು ಬಿಗಿಯಾದ ಸೂಟ್ ಧರಿಸಿದ್ದ, ತಲೆಗೆ ಹೆಲ್ಮೆಟ್ ಹಾಕಿದ್ದ ವ್ಯಕ್ತಿಗಳು ಅಲ್ಲೇ ಪ್ರತ್ಯಕ್ಷರಾಗಿ ಇವನನ್ನು ಒಳಗೆ ಬಾ ಎಂದು ಕರೆದರಂತೆ... ಇವನೂ ಮೂಕನಂತೆ ಹಿಂಬಾಲಿಸಿದನಂತೆ. ಒಳಗೆ ಬ್ರೈಟ್ ಬೆಳಕು ಚೆಲ್ಲಿದ ನೌಕೆಯಲ್ಲಿ ಹಳದಿ ದೀಪವೊಂದು ತಲೆಯ ಭಾಗದಲ್ಲಿ ನಿಂತು ಇವನನ್ನು ಪರೀಕ್ಷಿಸಿತಂತೆ. ನಿನಗೆ ವಯಸ್ಸೆಷ್ಟು ಎಂದು ಯಾರೋ ಕೇಳಿದಂತಾದಾಗ "77" ಎಂದು ಉತ್ತರಿಸಿದನಂತೆ. ಆಗ ಇವನ ನಿರಾಸೆಗೆ "ನೀನು ತುಂಬಾ ವೃದ್ಧ, ನಿನ್ನಲ್ಲಿ ನಮಗೆ ಬೇಕಾದುದ್ದು ಸಿಗುವುದಿಲ್ಲ, ಕ್ಷಮಿಸು" ಎಂದು ಹೇಳಿ ಅನಾಯಾಸವಾಗಿ ಹೊರಗೆ ಬಿಟ್ಟರಂತೆ. ಅವನು ಹೊರಗಿಳಿದಂತೆ ಗಗನನೌಕೆ ಬಾಗಿಲು ಮುಚ್ಚಿ ಕ್ಷಣಾರ್ಧದಲ್ಲಿ ಮೇಲೆ ಹಾರಿ ಹೋಯಿತಂತೆ. ಆಮೇಲೆ ಅವನು ಮೀನು ಹಿಡಿಯಲು ಹೋದನಂತೆ, ಆತನು ಎಂದೂ ಸುಳ್ಳು ಹೇಳಿದವನಲ್ಲ ಎನ್ನುತ್ತಾರೆ..1986 ರಲ್ಲಿ ಮೃತನಾಗುವವರೆಗೂ ಬರ್ಟೂ ಈ ಕತೆಯನ್ನು ಎಲ್ಲರಿಗೂ ಸ್ವಲ್ಪವೂ ಬದಲಾಯಿಸದೇ ಹೇಳಿದ್ದಾನೆ. ವೈದ್ಯರೂ ಚೆಕ್ ಮಾಡಿ ಹೊಸದೇನೂ ಕಂಡು ಹಿಡಿಯಲಿಲ್ಲ.*



**Top UFO Expert Confirms Man's Astounding Claim:**

**I Was Taken Aboard an Alien Spacecraft and Examined Like a Bug**

**A 77-year-old man says he was taken aboard a spacecraft by four-foot-tall aliens wearing green suits and helmets — and a top UFO expert who has lectured to British government leaders says his astounding story is true.**

Recalling his terrifying abduction, Alfred Burtoo of Aldershot, England, revealed that the strange squat creatures examined him under an amber spotlight, then told him: "You can go. You are too old and infirm for our purposes."

Burtoo said the phenomenal encounter with otherworldly beings occurred early in the morning last August 12, as he was fishing in a canal.

"I spotted a light in the sky coming toward me," he recalled. "I thought: 'It can't be an airplane, because it's only 300 feet off the ground. I wonder if it's a helicopter?'

"It landed behind some bushes, which blocked my view. Then I saw two shapes emerge from the bushes.

"They were about four feet high and dressed from head to foot in pale green coveralls. They had helmets of the same color, with their visors blacked out. I stood frozen to the spot in terror.

" 'It must be a terrible dream,' I told [redacted] raised his [redacted] em. [redacted] hem. It [redacted] raft . . . [redacted] p into the air and shot away [redacted] t tremendous speed," Burtoo recounted.

Timothy Good, who has lectured on UFOs before a top British government commission probing UFO reports, told The ENQUIRER, "I am convinced this man is telling the truth."

Good, who has also lectured on UFOs at universities throughout England, said he interviewed Burtoo more than 12 times over several months and subjected him to a battery of questions. Burtoo always told the same story, exact in every detail. Good also investigated Burtoo's background.

"There is no doubt in my mind that he was taken aboard an alien craft," concluded Good, who's also an author and consultant to the British Broadcasting Corp.

Omar Fowler, chairman of the Surrey Investigation Group on Aerial Phenomena, which includes pilots and scientists among its members, added: "This is really an exciting case. I believe it to be genuine."

— *JOHN COLLINS*

**GREEN-SUITED** aliens drew Alfred Burtoo into their craft and examined him.

**ENCOUNTER** with aliens terrified Alfred Burtoo.

July 17, 1984 | Page 14 | NATIONAL ENQUIRER

4. ***ಪ್ಯಾಟ್ ಬ್ರೌನ್ ಎಂಬ ವೈದ್ಯೆ ಹೇಳಿದ ಕತೆ: , ಪ್ಯಾನೋರಮ ಸಿಟಿ, ಕ್ಯಾಲಿಫೋರ್ನಿಯಾ:***

   *ಫಿಸಿಯೋ ಥೆರಪಿ ವೈದ್ಯ ವೃತ್ತಿ ಮಾಡುವ ಪ್ಯಾಟ್ ಅನ್ಯಗ್ರಹ ಜೀವಿ ಇತ್ಯಾದಿ ಬಗ್ಗೆ ಮೊದಲೆಲ್ಲಾ ಏನನ್ನೂ ತಿಳಿಯದಾಕೆ.*

   ***1992*** *ರ ಫಾಲ್ ನಲ್ಲಿ ಗ್ರೇಯ್ಸ್ ಎಂಬ ಜೀವಿಗಳ ಸಂಪರ್ಕವಾಯಿತಂತೆ. ಆಕೆಯನ್ನು ಮೊದಲಬಾರಿಯೇ 4 ಅಡಿ ಎತ್ತರದ ಜೀವಿಗಳು ತಮ್ಮ ಗಗನನೌಕೆಯ ಪ್ರವಾಸ ಮಾಡಿಸಿ ತೋರಿದವಂತೆ. ಆಕೆಯನ್ನು ಅಲ್ಲಿನ "ಮಾಸ್ಟರ್"*

*ಎಂಬವರ ಬಳಿ ಕರೆದೊಯ್ದರಂತೆ. ಅಲ್ಲಿ ಆಕೆಗೆ ಹಲವಾರು ಜಗತ್ತಿಗೆ ಸಂಬಂಧಿಸಿದ ಸಂದೇಶಗಳನ್ನು ಕೊಟ್ಟರಂತೆ. "ಅವರು ಹೇಳಿದ್ದು ಹೆಚ್ಚು ನನಗೆ ಅರ್ಥವಾಗಲಿಲ್ಲ, ಆದರೆ ಅವೆಲ್ಲ ನನ್ನ ಪ್ರಭಾವಳಿ/ ದಿವ್ಯಕಾಂತಿ ಅಥವಾ "aura" ಗೆ ಸಂಬಂಧಿಸಿದ್ದು" ಎಂದು ಹೇಳಿದ್ದಾಳೆ.*
*ಆಗ ಇದ್ದಕ್ಕಿದ್ದಂತೆ ಆ 'ಮಾಸ್ಟರ್ ಗ್ರೇಯ್ಸ್ ಜೀವಿ ತನ್ನ ಆಕಾರ ಬದಲಿಸಬಲ್ಲುದೇನೋ, ಬ್ಲಾಂಡ್ ಕೂದಲಿನ ಮಾನವನಾಗಿ ಎದುರಿಗೆ ಕಾಣಿಸಿದಾಗ ಪ್ಯಾಟ್ "ಹೀಗೇಕೆ ಬದಲಾದೆ?" ಎಂದು ಕೇಳಿದಳಂತೆ. "ನಿನ್ನ ಮನಸ್ಸಿನಲ್ಲಿ ಹೀಗಿರಲಿ ಎಂದು ನೀನು ಇಚ್ಚೆ ಪಟ್ಟಿದ್ದರಿಂದ" ಎಂದುತ್ತರಿಸಿತು ಮಾನವರೂಪಿ.*
*ಪ್ಯಾಟ್ ಬ್ರೌನ್ ಳನ್ನು ಆಕೆಯ ಸೂಕ್ಷ್ಮ ದೇಹದಿಂದ ಹೊರತೆಗೆದು ಅವಳಿಗೇ ತೋರಿಸಿ- "ಇದು ನಿನ್ನ ಆಸ್ಟ್ರಲ್ (astral) ಬಾಡಿ, ನಿನ್ನ ಕರ್ಮ ಪ್ರಕಾರ ನಿನ್ನ ಜತೆಯೇ ಜನ್ಮ ಜನ್ಮಕ್ಕೂ ಬರುತ್ತದೆ" ಎಂದರಂತೆ.*
*(**ಇಲ್ಲಿ ಗಮನಿಸಿ : ಈಕೆ ಪಕ್ಕಾ ಕ್ರಿಶ್ಚಿಯನ್, ನಡೆದುದ್ದು ಅಮೆರಿಕಾದಲ್ಲಿ ಎಲ್ಲೋ ...ಎಲ್ಲಿಯೂ ಯಾವ ಹಿಂದೂ ಪಂಡಿತನ ಪಾತ್ರವಿಲ್ಲ!**)*

*ಆಕೆಗೆ ಇನ್ನೂ ಎರಡು ಬಾರಿ ಹೀಗೇ ಕರೆದೊಯ್ದು **ವೈಬ್ರೇಷನ್ಸ್ (ಕಂಪನ) ಮತ್ತು ಆರಾ ಹೀಲಿಂಗ್** ಚಿಕಿತ್ಸೆ ಹೇಳಿಕೊಟ್ಟು ಇದೆಲ್ಲಾ ಆಸ್ಟ್ರಲ್ ಬಾಡಿಯ ಲೆವೆಲ್ಲಿನಲ್ಲಿ ಕೆಲಸಮಾಡುತ್ತವೆ, ಫಿಸಿಕಲ್ ದೇಹದ ಮೇಲಲ್ಲ.. 'ನೀನು ವೈದ್ಯೆ ಅಲ್ಲವೆ , ಇದು ನಿನಗೆ ಉಪಯೋಗವಾಗಲಿ' ಎಂದರಂತೆ. **( ಹೀಗೇ REIKI, ಅರೊಮಾಥೆರಪಿ (aromatherapy) ಎರಡನ್ನೂ ಅನ್ಯಗ್ರಹ ಜೀವಿಗಳ ಕೊಡುಗೆ ಎನ್ನುತ್ತಾರೆ, ಮುಂದೆ ಬರೆಯುವೆ)***
*ಈಕೆಯನ್ನು ವಿಜ್ಞಾನಿಗಳು, ಅಪನಂಬಿಕೆ ಪಟ್ಟವರು ಹಲವು ಬಾರಿ ಸಾರ್ವಜನಿಕ ಸಭೆಯಲ್ಲಿ ಪ್ರಶ್ನಿಸಿದ್ದಾರೆ. "**ಇದೆಲ್ಲಾ ನಿನ್ನ ಭ್ರಮೆ, ಸುಳ್ಳುಕತೆ, ಮೂಢನಂಬಿಕೆ ಹರಡುವೆಯಾ ಸಮಾಜದಲ್ಲಿ**?" ಎಂದೆಲ್ಲಾ ಟೀಕಿಸಿದ್ದಾರೆ, ಧಿಕ್ಕರಿಸಿದ್ದಾರೆ. ಎಂದೂ ಆಕೆ ತನ್ನ ಅನುಭವಗಳನ್ನು ಬದಲಿಸಿ ಹೇಳಲಿಲ್ಲ, ತಪ್ಪೆಂದು ಒಪ್ಪಿಕೊಳ್ಳಲೂ ಇಲ್ಲ. 'ತಾನಾಗಿ ಅವರ ಬಳಿ ಬಯಸಿ ಹೋಗಲಿಲ್ಲ, ಹೀಗೇ ನಡೆಯಿತು' ಎನ್ನುತ್ತಾಳಾಕೆ.*



*(ಒಂದು ಸೂಚ್ಯ ಚಿತ್ರ ಮೇಲೆ, ಆದರೆ ಇದೇ ಕೇಸಿನದಲ್ಲ)*

5. ***ಅರಿಜೋನಾ, 1995 : ವಿಲಿಯಂ ಮತ್ತು ರೋಸ್ ಶೆಲ್ಹಾರ್ಟ್:***



***( ಸೂಚ್ಯವಾಗಿ ಹೋಲಿಕೆಯ ಚಿತ್ರ)***

ಈ ಮಧ್ಯಮ ವರ್ಗದ ಮಧ್ಯವಯಸ್ಸಿನ ದಂಪತಿಗಳು ಅರಿಜೋನಾದಲ್ಲಿ ಸೆಡೋನಾ ಬಳಿ ಕಾರಿನಲ್ಲಿ ಹೋಗುತ್ತಿದ್ದಾಗ ಒಂದು ಬೆಳ್ಳನೆಯ ಪ್ರಕಾಶಮಾನವಾದ ವಸ್ತು ಗಗನದಲ್ಲಿ ಇವರನ್ನು ಹಿಂಬಾಲಿಸುತ್ತಲೇ ಬಂದಿತು. ಇವರೊಂದಿಗೆ ಸತಾಯಿಸುವಂತೆ ಬೆಕ್ಕು-ಇಲಿ ಕಣ್ಣಾಮುಚ್ಚಾಲೆ ಆಟ ಆಡತೊಡಗಿತು. ಕೊನೆಗೂ ಅದೇ ಗೆದ್ದು ಇವರ ಪಕ್ಕದ ಗದ್ದೆಯಲ್ಲಿ ಇಳಿದೇ ಬಿಟ್ಟಿತು. ಅದೇ ಇವರಿಗೆ ನೆನಪಿರುವುದು ಪ್ರಜ್ಞೆ ತಪ್ಪುವ ಮೊದಲು. ಎಚ್ಚರವಾದಾಗ ಅವರು ತಮ್ಮ ಹೋಟೆಲ್ ರೂಮಿನಲ್ಲಿದ್ದರಂತೆ. ಹಲವಾರು ಗಂಟೆಗಳು ಕಳೆದುಹೋಗಿವೆ ನಾವು ಎಲ್ಲಿ ಹೋಗಿದ್ದೆವು, ಯಾವಾಗ ಬಂದೆವು ಎಂಬುದೇ ಅರಿಯದಾಗಿ ತಮ್ಮ ಮನೋವೈದ್ಯರನ್ನು ಭೇಟಿಯಾದರಂತೆ.

ಆಗ ಅವರಿಗೆ ಹಿಪ್ನೋಟೈಸ್ ಮಾಡಿದಾಗ ಅವರಿಗೆ ಈ ಅನುಭವ ಆಗಿದೆ ಎಂದು ಹೇಳಿದ್ದಾರೆ:

*ಅವರನ್ನು ಆ ಅನ್ಯಗ್ರಹ ಜೀವಿಗಳು ತಮ್ಮ ನೌಕೆಯೊಳಕ್ಕೆ ಕರೆದೊಯ್ದಿದ್ದಾರೆ. ಅವರನ್ನು ಅಲ್ಲಿನ ಪರಿಚಯವೆಲ್ಲಾ ಮಾಡಿಸಿ, ಅವರ ಜತೆ ಅತಿಥಿಗಳ ರೀತಿಯಲ್ಲಿ ಮರ್ಯಾದೆಯಿಂದ ವರ್ತಿಸಿದ್ದಾರೆ. ವಿಲಿಯಂ ಗಿಂತಾ ರೋಸಿಗೆ ಹೆಚ್ಚು ನೆನಪಿದೆ.*

*"ನಾವು ನಿಮಗೆ ಸಹಾಯ ಮಾಡಲು ಬಂದಿದ್ದೇವೆ. ನಿಮಗೆ ಹಲವು ಸಂದೇಶಗಳನ್ನು ಕೊಡುತ್ತೇವೆ." ಎಂದು ಹೇಳಿ ಆಕೆಗೆ: "ನಿನ್ನ ಗಂಡ ವಿಲಿಯಮ್ಮಿಗೆ ಪಕ್ಕದ ಕೋಣೆಯಲ್ಲಿ ಸಂದೇಶವನ್ನು ಕೊಡುತ್ತಿದ್ದೇವೆ, ಭಯಪಡಬೇಡ" ಈಕೆಯು -ನೀವು ಎಲ್ಲಿಯವರು? ಎಂದಾಗ ಅವರು "ನಿಮಗೆ ಇನ್ನೂ ಗೊತ್ತಿಲ್ಲದ ಬಹು ದೂರದ ಸ್ಥಳದವರು ಎಂದು ತಿಳಿದುಕೊಂಡರೆ ಸಾಕು" ಎಂಬ ಅನಿಶ್ಚಿತ ಉತ್ತರ ಸಿಕ್ಕಿದೆ.*

*ಯಾಕೆ ಬಂದಿರಿ ಎಂದಾಗ , "ನಿಮ್ಮಲ್ಲಿ ಕೆಲವರಿಗೆ ಬುದ್ಧಿ ಹೇಳಿದರೆ ಇಡೀ ಮಾನವತೆಗೆ ಸಹಾಯವಾಗಿ ನಿಮಗೆಲ್ಲ ಶಾಂತಿಯುತ ಪ್ರಗತಿ ಸಿಗಲಿದೆ ಎಂದು ನಮ್ಮವರು ನಂಬಿದ್ದಾರೆ. ನಿಧಾನವಾಗಿ ಈ ಸಂದೇಶಗಳು ಕೆಲವರ ಮೂಲಕ ಪ್ರಸಾರವಾಗುತ್ತಾ ಬರಲಿ, ಎಲ್ಲರಿಗೂ ನಮ್ಮ ಬಗ್ಗೆ ಒಟ್ಟಿಗೇ ಹೇಳಿದರೆ ಕೋಲಾಹಲವಾಗುತ್ತದೆ, ನಮ್ಮ ಉದ್ದೇಶ ಫಲಿಸದು... ನಮ್ಮನ್ನೇ ವೈರಿಗಳಂತೆ ಕಾಣಬಹುದು. ನಿಮ್ಮಲ್ಲಿ ನಂಬಿಕೆ ಕಡಿಮೆ, ಸಂಶಯ ಹೆಚ್ಚು!" ಎಂದರಂತೆ.*

*ಅವರಿಗೆ ಜೀವನ ಪೂರ್ತಿ ಈ ರೀತಿಯ ಹಲವು ಅನುಭವಗಳೂ, ಸಂದೇಶಗಳು ಸಿಕ್ಕಿವೆ.*

*ವಿಲಿಯಮ್ ಗಿದ್ದ ಕಾರ್ಪೆಲ್ ಟನೆಲ್ ಸಿಂಡ್ರೋಮ್ ಎಂಬ ಕೈ ವ್ಯಾಧಿ ಸಂಪೂರ್ಣವಾಗಿ ಯಾವುದೇ ಔಷಧಿಯಿಲ್ಲದೇ ಈ ಅನ್ಯಗ್ರಹ ಜೀವಿಗಳ ಸಂಪರ್ಕದಿಂದ ಗುಣವಾಯಿತು ಎಂದಿದ್ದಾನೆ.*



6. **1992, ಕಾರ್ಲಿಫೋರ್ನಿಯಾ :**

ಮರಿಯಾನ್ ಎಂಬ ಕ್ಯಾಲಿಫೋರ್ನಿಯಾದ ವೈಟ್ರೆಸ್ಸ್ ಒಬ್ಬಳಿಗೆ ಹೀಗೇ ಮನೆಯಲ್ಲಿ ಟಿವಿ ನೋಡುತ್ತಿದ್ದಾಗ ಪಕ್ಕದಲ್ಲೆ ಬೂದು ಬಣ್ಣದ ಬೋಡ ಮುದುಕ ಗ್ರೇಯ್ಸ್ ಜೀವಿ ಬಂದು ಅವಳಿಗೆ ಹಲವು ಸಂದೇಶಗಳನ್ನು ನೀಡಿತಂತೆ:-

- ನಾವು ಸಹಸ್ರರು ವರ್ಷಗಳಿಂದ ನಿಮ್ಮ ಸಾಗರಗರ್ಭದ ಒಂದು ಲೋಕದಲ್ಲಿದ್ದೇವೆ. ನಿಮಗೆ ತಿಳಿಯಲಾಗದು.
- ನಮ್ಮಲ್ಲಿ ಅಣ್ವಸ್ತ್ರ ಬಾಂಬ್  ಇತ್ಯಾದಿ ಇಲ್ಲ
- ಅಲ್ಲಿಂದಲೇ ತೇಲುವ ನೌಕೆಯಲ್ಲಿಯೇ ಹಾರಲೂಬಹುದು, ಅಂತರಿಕ್ಷಕ್ಕೂ ಹೋಗಿಬರುತ್ತಿದ್ದೇವೆ.
- ನಿಮ್ಮ ಭೂಮಿಯ ಬಗ್ಗೆ ನಮಗೆ ಕಾಳಜಿಯಿದೆ. ನೀವು ಯುದ್ಧ ಮಾಡಿ ಎಲ್ಲಿ ಹಾಳಾಗಿಹೋಗುವಿರೋ ಎಂದು.
- ಭೂಮಿಗೆ ಹಲವು ಬಗೆಯ ಜೀವಿಗಳು ಬೇರೆ ಗ್ರಹಮಂಡಲದಿಂದ ಬಂದು ಹೋಗುತ್ತಿವೆ,ಎಲ್ಲರಿಗೂ ಭೂಮಿಯ ಮೇಲೆ ವಿಶೇಷ ಆಸಕ್ತಿಯಿದೆ, ಆದರೆ ಒಂದೇ ಕಾರಣಕ್ಕಲ್ಲ, ಎಲ್ಲರೂ ನಿಮ್ಮ ಹಿತೈಷಿಗಳೂ ಅಲ್ಲ. ಕೆಲವರು ತಮ್ಮ ವಂಶವನ್ನೇ ಬಲಗೊಳಿಸಲು, ಮಿಶ್ರತಳಿ ಮಾಡಲು ನಿಮ್ಮ ದೇಹವನ್ನು ಬಳಸಲೂ ಬರುತ್ತಾರೆ.

ಆಕೆಗೆ ಈ ವಿಷಯವೇ ಹೊಸದಿದ್ದರಿಂದ ಏನು ಮಾಡಬೇಕೆಂದು ತಿಳಿಯದೇ ತಮ್ಮ ವೈದ್ಯರ ಬಳಿ ಹೇಳಿ ಈ ಘಟನೆಗಳಡಿಯಲ್ಲಿ ದಾಖಲೆಯಾಗಿದೆ.

ಇನ್ನೂ ಇದೇ ಬಗೆಯ ಹಲವಾರು  ಯಾಕೆ, ನೂರಾರು ಕೇಸುಗಳಿವೆ. ಎಲ್ಲವನ್ನೂ ಬರೆಯುವುದರಲ್ಲಿ ಅರ್ಥವಿಲ್ಲ.

ನಿಮಗೆ ಕೊನೆಗೆ ಗ್ರಂಥಸೂಚಿಯಲ್ಲಿ ಕೊಡುತ್ತೇನೆ, ಓದಿಕೊಳ್ಳಿ.

# 5ನೇ ಕಂತು:

# ಚಂದ್ರನಲ್ಲಿ ಯಾರೋ ಇದ್ದಾರಾ?

- **ಚಂದ್ರಮಾ ಮನಸೋ ಜಾತಃ** ಎನ್ನುತ್ತದೆ ಪುರುಷ ಸೂಕ್ತ. ಪ್ರಜಾಪತಿ/ಪುರುಷನ ಮನಸ್ಸಿನಿಂದ ಚಂದ್ರ ಹುಟ್ಟಿದನೆಂದು ಸನಾತನ ಧರ್ಮ ಹೇಳುತ್ತದೆ. ನಮ್ಮ ಶಾಸ್ತ್ರಗಳಲ್ಲಿ ಚಂದ್ರನನ್ನು ನವಗ್ರಹಗಳಲ್ಲಿ ಸೇರಿಸಿದ್ದೂ ಉಂಟು.
- ಖಗೋಳಶಾಸ್ತ್ರಜ್ಞರು ಆನಂತರ ಚಂದ್ರನು ಭೂಮಿಯ ಉಪಗ್ರಹ , ಭೂಮಿಯ ಸುತ್ತ ಮಾತ್ರ ಸುತ್ತುತ್ತಾನೆ ಎಂದರು.
- ರಾತ್ರಿಯ ಬೆಳದಿಂಗಳು ರೊಮ್ಯಾಂಟಿಕ್ ಸಾಹಿತ್ಯದಲ್ಲಿ, ಗೀತೆಗಳಲ್ಲಿ ವಿಶೇಷ ಸ್ಥಾನ ಪಡೆದಿದ್ದೂ ಹೌದು. ಮಧುಚಂದ್ರ/ ಹನಿಮೂನ್ ನಮಗೆಲ್ಲಾ ಮಧುರ ನೆನಪುಗಳನ್ನೇ ತರುತ್ತದೆ. ☺
- ಭೂಮಿ ಹುಟ್ಟಿದಾಗಿಲಿಂದಲೂ ಚಂದ್ರನಿದ್ದೇ ಇದ್ದಾನೆ. ಅವನ ಮೇಲಿನ ಹಳ್ಳ ಕೊಳ್ಳ,ಕಣಿವೆಗಳ ಮಸಕು ಕಲೆಗಳನ್ನು ಕಂಡು 'ಅದೊಂದು ಮೊಲ' ಎಂದು ಊಟ ಮಾಡಿಸುವಾಗ ಮಕ್ಕಳಿಗೆ ಹೇಳಿ ನಾವು ಮಾತ್ರ ಅಲ್ಲೇನಿದೆ? ಎಂದು ಅಚ್ಚರಿ ಪಟ್ಟಿದ್ದೂ ಆದಿಕಾಲದಿಂದಲೇ.

ನಮಗೆ ತಿಳಿದ ಲೆಕ್ಕದ ಪ್ರಕಾರ ಚಂದ್ರನಿಗೆ ವಯಸ್ಸು 4.6 ಬಿಲಿಯನ್ ವರ್ಷಗಳಾಗಿವೆ, ಅದು 2,38,000 ಮೈಲಿ ನಮ್ಮಿಂದ ದೂರದಲ್ಲಿದೆ.

ವೈಜ್ಞಾನಿಕ ಪ್ರಗತಿ ತೀವ್ರವಾಗುತ್ತಾ ಬಾಹ್ಯಾಕಾಶವನ್ನು ಗೆದ್ದ ತಂತ್ರಜ್ಞಾನಕ್ಕೆ ಚಂದ್ರನತ್ತ ನಿಜಕ್ಕೂ ಪ್ರಯಾಣ ಬೆಳೆಸಲು 20 ನೆ ಶತಮಾನದಲ್ಲಿ ಸಾಧ್ಯವಾಯಿತು. ಮೊತ್ತ ಮೊದಲು ರಾಕೆಟ್ ಮತ್ತು ಉಪಗ್ರಹ ವಿಜ್ಞಾನಿಗಳು ಅಮೇರಿಕಾದಲ್ಲಿ ಅಪೋಲೋ ಮಿಷನ್ ಎಂದು ಆರಂಭಿಸಿದ್ದು 1967ರಲ್ಲಿ. ಹಾಗೂ ಹೀಗೂ ಕುಂಟುತ್ತಾ ಪ್ರಗತಿ ಮಾಡಿದ ಈ ಮಿಷನ್ನಿನ 11 ನೇ ಪ್ರಯೋಗ ಚಂದ್ರನ ಮೇಲಿನ 'ಸೀ ಆಫ್ ಟ್ರಾಂಕ್ವಿಲಿಟಿ ' (ಪ್ರಶಾಂತ ಸಮುದ್ರ?) ಎಂಬ ಪ್ರದೇಶದಲ್ಲಿ ಜುಲೈ 20, 1969 ರಂದು ಮಾನವ ಸಿಬ್ಬಂದಿ ಸಮೇತ ಇಳಿಯಿತು. ಮೊದಲು ಚಂದ್ರನ ಮೇಲೆ ಪಾದವಿಟ್ಟ ನೀಲ್ ಆರ್ಮ್‌ಸ್ಟ್ರಾಂಗ್ ಎಂಬ ಗಗನಯಾತ್ರಿ "**ಒಬ್ಬನಿಗೊಂದು ಚಿಕ್ಕ ಹೆಜ್ಜೆ, ಆದರೆ ಮಾನವಕುಲಕ್ಕೆ ದೊಡ್ಡ ಜಿಗಿತ**" ಎಂದು ಖುಶಿ ಪಟ್ಟಿದ್ದೂ ನಮಗೆಲ್ಲಾ ಗೊತ್ತು. ಅಮೆರಿಕನ್ ಧ್ವಜ ಅಲ್ಲಿ ಹಾರಿಸಿದ್ದೂ ಆಯಿತು.

ಅಲ್ಲಿ ಹಲವಾರು ಗಂಟೆ ಕಳೆದ ಗಗನಯಾತ್ರಿಗಳಿಬ್ಬರು (ಆಲ್ಡ್ರಿನ್ ಮತ್ತು ಆರ್ಮ್ ಸ್ಟ್ರಾಂಗ್) 47.5 ಪೌಂಡ್ ಮಣ್ಣು ಕಲ್ಲಿನ ಸ್ಯಾಂಪಲ್ ತೆಗೆದುಕೊಂಡರು. ಸುಮಾರು 21 ಗಂಟೆ ಕಾಲ ಚಂದ್ರನ ನೆಲದ ಮೇಲೆ ಕಳೆದರಂತೆ. ಇದೆಲ್ಲಾ ನಮಗೆ ತಿಳಿದ ವೈಜ್ಞಾನಿಕ ಇತಿಹಾಸ.

ಅಲ್ಲಿ ಇಳಿದಾಗ ಅಲ್ಲಿ ಯಾವುದೇ ಸಸ್ಯ/ ಪ್ರಾಣಿಯಿಲ್ಲದೇ ನಿರ್ಜನವಾಗಿತ್ತೆಂದೂ, ಅಲ್ಲಿ ಗುರುತ್ವಾಕರ್ಷಣ ಶಕ್ತಿಯಾಗಲಿ, ಆಮ್ಲ ಜನಕ ಪ್ರಾಣವಾಯುವಾಗಲಿ ಇಲ್ಲವೆಂದು ನಮಗೆ ಸಿದ್ಧಪಟ್ಟಿತು ಎಂದರು. ಅದರ ನಂತರ 12 ರಿಂದ 17ರವರೆಗೂ ನಂಬರ್ ಹಾಕಿದಂತೆ ಈ 'ಮೂನ್ ಮಿಷನ್' ಗಳೂ ನಡೆದವು. ಮೊದಲೇ ಗೊತ್ತಿಲ್ಲದ ಯಾವುದೇ ವಿಷಯ ಎಂತದ್ದೂ ತಿಳಿಯಲಿಲ್ಲ, ಚಿಕ್ಕ ಪುಟ್ಟ ಮಾಹಿತಿ ಬಿಟ್ಟರೆ...ಕೊನೆಯದು ಅಪೋಲೋ 17 ಡಿಸೆಂಬರ್ 7, 1972 ರಲ್ಲಿ ಮುಗಿಯಿತು..

ಇದಲ್ಲದೇ ರಷ್ಯಾದ ಉಪಗ್ರಹಗಳು ಕೂಡಾ ಲೂನಿಕ್ 13 ಎಂಬ ಹೆಸರಲ್ಲಿ ಚಂದ್ರನನ್ನು ಮುಟ್ಟಿ ಬಂದಿವೆ. ಆಮೇಲೆ ಚೀನಾ ಕೂಡಾ!

ಇವೆಲ್ಲಾ ಅಧಿಕೃತ ಮಾಹಿತಿ, ನಮ್ಮ ಗಮನಕ್ಕಾಗಿ ಸರಕಾರಗಳು ನೀಡಿವೆ.!!!

ಆದರೆ......

## 3.3 ಅಯ್ಯೋ, ಅವರಿದ್ದಾರೆ!

### 3.3.1

ಆ ಅಪೋಲೋ 11 ಮಿಷನ್ನಿನ ಹಲವು ಸೀಕ್ರೆಟ್ ಸಂಭಾಷಣೆಗಳನ್ನು NASA ಮತ್ತು ಅನಂತರ CIA ರವರು "above TOP SECRET" ಎಂಬ ಶೀರ್ಷಿಕೆಯಡಿ ಫೈಲ್ ಮಾಡಿ ಗುಪ್ತವಾಗಿಟ್ಟಿದೆ ಎಂದು ಹಲವು ನಂಬಲರ್ಹ ಮೂಲಗಳು ಹೇಳಿಕೆ ಕೊಟ್ಟಿವೆ.

ಅದರೊಂದಿಗೆ ಒಬ್ಬ ನಿವೃತ್ತ ಮೇಜರ್- **ಬಾಬ್ ಡೀನ್, ಸುಪ್ರೀಮ್ ಹೆಡ್ ಕ್ವಾರ್ಟರ್ಸ್- NATO** ದಲ್ಲಿ ದುಡಿದವರು ಹೀಗೆ ಹೇಳಿಕೆ ಕೊಟ್ಟಿದ್ದಾರೆ:

## ಭೂಮಿಗೆ ಬಂದ ಅನ್ಯಗ್ರಹಜೀವಿಗಳು: ಒಂದು ಅಧ್ಯಯನ:

https://www.collective-evolution.com/2017/05/13/theyre-parked-on-the-side-of-the-crater-theyre-watching-us-when-neil-armstrong-landed-on-the-moon/

*"ಮಾನ್ಯರೇ, ನಮ್ಮ ಸರಕಾರದ NASA ಸಂಸ್ಥೆಯು ತನ್ನ ಬಳಿ ಇದ್ದ ಚಂದ್ರಯಾನ ಅಪೋಲೊ ಮಿಷನ್ನಿಗೆ ಸಂಬಂಧಿಸಿದ 40 ಫಿಲ್ಮ್ ರೋಲ್ಸ್ ಅನ್ನು ಸುಟ್ಟುಹಾಕುತ್ತಿದೆ.. ಚಂದ್ರನಿಗೆ ಹೋದ ವಾಹನ, ಇಳಿದಿದ್ದು, ಮಾಹಿತಿ ಸಂಗ್ರಹಿಸಿದ್ದು ಇತ್ಯಾದಿ...*




***40 rolls of films!*** *ದೇವರೇ ಗತಿ! ಅವರು ಅದೆಲ್ಲಾ ಹಾಳುಮಾಡಿಬಿಟ್ಟರು. ಈ ಚಿತ್ರದ ಯಾವ ಫ್ರೇಮಿನಲ್ಲಿದ್ದ ದೃಶ್ಯವನ್ನೂ ನಾವು ನೋಡಲು ಅರ್ಹರಲ್ಲವಂತೆ...ಅವೆಲ್ಲಾ "ವಿನಾಶಕಾರಿ" ಯಂತೆ, "ಸಾಮಾಜಿಕವಾಗಿ ಒಪ್ಪಲಾರದಂತವು", "ರಾಜಕೀಯವಾಗಿ ಅನುಮತಿ ಸಿಗದಂತಾ ದಾಖಲೆಗಳು, ನೋಡಬಾರದಂತವು" ಎಂದರು. ನಾನು ನಿವೃತ್ತ ಮೇಜರ್, ನನಗೆ ಬಹಳ ಕೋಪ ಬಂದಿದೆ, ನನಗೆ ಇಂತದೆಲ್ಲಾ ಸಹಿಸಲಾಗುತ್ತಿಲ್ಲ"*

***ಯಾಕೆ ಅಂತಾ ಅಮೂಲ್ಯ ದಾಖಲೆಯನ್ನು ಹಾಳು ಮಾಡಿದರು? ಏನಿತ್ತು ಅದರಲ್ಲಿ? ಯಾರು ಇದನ್ನು ನಿರ್ಧರಿಸಿದ್ದು?...***

ಇವರ ಹೆಸರೇನು? ನಾಸಾ ವೆ ಅಥವಾ ನಾಶವೆ?

## 3.3.2 ನೀಲ್ ಆರ್ಮ್ ಸ್ಟ್ರಾಂಗ್ ನೋಡಿದರೆನ್ನಲ್ಲಾದ UFO ನಿಲ್ದಾಣ:

ನಿವೃತ್ತಾ ನಾಸಾ ಅಧಿಕಾರಿ **ಕೆನ್ ಜಾನ್ಸ್ನನ್** ಬಹಿಮುಖ ಪ್ರತಿಭೆಯ ಜೀನಿಯಸ್, ಆತ **F4** ಪೈಲೆಟ್, ಬೋಯಿಂಗ್ ಎಂಜಿನಿಯರ್, ಫೈಟರ್ ಜಾಕ್. ಅಲ್ಲದೇ ಲೂನಾರ್ ಮಾಡ್ಯೂಲ್ , ಹೂಸ್ಟನ್, ಟೆಕ್ಸಾಸಿನಲ್ಲಿ ಮುಖ್ಯಧಿಕಾರಿ. "ನಾಸಾ"ದಲ್ಲೇ ಅಪೋಲೋ ಮಿಷನ್ ಸಮಯದಲ್ಲಿ ಮುಖ್ಯ ಭೂಮಿಕೆಯಲ್ಲಿದ್ದವ.



ಹಾಗಾಗಿ ಆತ ಸುಳ್ಳುಪೊಳ್ಳು ಹೇಳುವ ವ್ಯಕ್ತಿಯಲ್ಲ. ನೀಲ್ ಆರ್ಮ್‌ಸ್ಟ್ರಾಂಗ್ರನ್ನು ಹತ್ತಿರದಿಂದ ನೋಡಿದವ, ಮಿತ್ರ. ನಾಸಾದಲ್ಲಿ **UFO** ನಂಬದವರೂ ಕೂಡಾ ಇವನನ್ನು ಗೌರವಿಸುತ್ತಾರೆ.

ಆತನ ಹೇಳಿಕೆ:

| |
|---|
| *"ಆರ್ಮ್‌ಸ್ಟ್ರಾಂಗ್ ಮತ್ತು ಆಲ್ಡ್ರಿನ್ ಚಂದ್ರನ ಮೇಲಿದ್ದಾಗ ನೀಲ್ ತನ್ನ ರೇಡಿಯೋ ಸೆಟ್ಟಿನಲ್ಲಿ ಮೆಡಿಕಲ್ ಚಾನೆಲ್ ತೆರೆದು ಚೀಫ್ ಆಫೀಸರ್ ಗೆ ಹೇಳಿದ: :"* **they're here, they're parked on the side of the crater, they're watching us."** |

***(ಅವರು ಇಲ್ಲೇ ಇದ್ದಾರೆ. ಈ ದೊಡ್ಡ ಕುಳಿಯ ಆ ಭಾಗದಲ್ಲಿ ನಿಂತು ನಮ್ಮನ್ನೇ ನೋಡುತ್ತಿದ್ದಾರೆ)**.*

ಸ್ವಲ್ಪ ಯೋಚಿಸಿ: ಹೀಗೆಲ್ಲಾ ಯಾರ ಬಗ್ಗೆ ಹೇಳಿರಲು ಸಾಧ್ಯ? ಯಾರು ಅವರಿಗಿಂತಾ ಮುಂಚೆಯೇ ಹೋಗಿ ನಿಂತು ನೋಡುತ್ತಿದ್ದಾರೆ?

ನಾಸಾದ **ಒಟ್ಟೋ ಬೆಂಡರ್** ಎಂಬ ಹಳೇ ಸಿಬ್ಬಂದಿಯವ ಇದಕ್ಕೆ ಪೂರಕವಾಗಿ ಹೀಗೆ ಬರೆದಿದ್ದಾನೆ:

***"ಮೈಕೇಲ್ ಸಾಲಾ, ಪಿ. ಎಚ್. ಡಿ ಹೇಳುವಂತೆ ಅದೇ ಸಮಯದಲ್ಲಿ ಹ್ಯಾಮ್ ರೇಡಿಯೋ ಆಪರೇಟರುಗಳು ಕೇಳಿಸಿಕೊಂಡ ಸಂಭಾಷಣೆಯ ಮುಂದಿನ ತುಣುಕು ಹೀಗಿದೆ:***

| |
|---|
| ***Mission Control: What's there ? Mission Control calling Apollo 11.*** |
| ***Apollo 11: These babies are huge, sir … enormous….Oh, God, you wouldn't believe it! I'm telling you there are other space craft out there… lined up on the far side of the crater edge… they're on the moon watching us.*** |
| ***( ಮಿಷನ್ ಕಂಟ್ರೋಲ್: ಅಲ್ಲಿ ಯಾರಿದ್ದಾರೆ?...ನಾವು ಮಿಷನ್ ಕಂಟ್ರೋಲ್ ಅಪೋಲೋ 11 ನ್ನು ಕೇಳುತ್ತಿದ್ದೇವೆ!*** |
| ***ಅಪೋಲೋ 11: ಈ ಬೇಬಿಗಳು (ಅಂತರಿಕ್ಷ ವಾಹನಗಳು ಎನ್ನಲು ಆಡುಭಾಷೆಯಲ್ಲಿ) ಬೃಹತ್ತಾಗಿವೆ ಸರ್... ಬಹಳ ದೊಡ್ಡ ಗಾತ್ರದ್ದು...ಅಯ್ಯೋ ದೇವರೇ, ನೀವು ನಂಬಲಿಕ್ಕೇ ಸಾಧ್ಯವಿಲ್ಲ. ನಾನು ಹೇಳುತ್ತಿದ್ದೇನೆ: ಇಲ್ಲಿ ಬೇರೆ ಗಗನ ನೌಕೆಗಳು ಇವೆ...ಅವರು ಕುಳಿಯ ವಿರುದ್ಧ ತೀರದಲ್ಲಿ ಸಾಲಾಗಿ ಕಾಣುತ್ತಿದ್ದಾರೆ. ಅವರು ಚಂದ್ರನ ಮೇಲೆಯೇ ಕುಳಿತುಕೊಂಡು ನಮ್ಮನ್ನು ಗಮನಿಸುತ್ತಲೇ ಇದ್ದಾರೆ!)"*** |

*ಇನ್ನೊಬ್ಬ ನೇವಿಯ ಆಫೀಸರ್ ಸಬ್ ಮೆರೀನ್ ಮಾಡೆಲಿಂಗ್ ಮಾಡಬಲ್ಲವರು ಎಂದು 'ನಾಸಾ'ದವರು ಆಸಕ್ತಿಯಿಂದ ಅಪೋಲೋ 11 ಸಿಬ್ಬಂದಿವರ್ಗಕ್ಕೆ ಡೆಪ್ಯುಟೇಷನ್ ಮೇಲೆ ಬಂದವರು- **ವಿಲಿಯಮ್ ಟಾಂಪ್ಕಿನ್ಸ್**, ಆಗ ಅಲ್ಲೇ ಇದ್ದವರು, ಹೀಗೆ ಹೇಳುತ್ತಾರೆ:*

| |
|---|
| ***"ಇಲ್ಲಿ ಬೃಹತ್ ಸೈಜಿನ ಗಗನ ನೌಕೆಗಳೂ ಬಂದು ನೋಡುತ್ತಿವೆ" ಎಂದ ನೀಲ್. ನಮ್ಮವರು ಸಾರ್ವಜನಿಕರಿಗೆ ಈ ಸಂಭಾಷಣೆ ಕೇಳಲು ಬಿಡಲೇ ಇಲ್ಲ. ಆಗ ನೀಲ್ ತನ್ನ ಕ್ಯಾಮೆರಾವನ್ನು 360 ಡಿಗ್ರಿ ಗುಂಡಗೆ ಸುತ್ತಿಸಿ ತೋರಿಸಿದ. ಅದನ್ನು ನೋಡಿದ CIA ಅಧಿಕಾರಿಗಳು ಇದು ಅತ್ಯಂತ ಗುಪ್ತ ವಿಚಾರ (way above TOP SECRET) ಎಂದು ರಹಸ್ಯವಾಗಿ ಫೈಲ್ ಮಾಡಿ ಮುಚ್ಚಿಟ್ಟರು.*** |

***ಟಿಮೋತಿ ಗುಡ್*** *ಎಂಬ UFO ಸಂಶೋಧಕ ಬರೆಯುತ್ತಾರೆ:*

*"ಇನ್ನೂ ಇದರ ಬಗ್ಗೆ ನಾಸಾ ಸಮ್ಮೇಳನದಲ್ಲಿ ನೀಲ್ ಆರ್ಮ್‌ಸ್ಟ್ರಾಂಗ್ ಸಂದರ್ಶನ ಒಮ್ಮೆ ಮಾಡಿದ ಬ್ರಿಟಿಷ್ ಸೀಕ್ರೆಟ್ ಸರ್ವೀಸ್ M16 ಅಧಿಕಾರಿಯೊಬ್ಬರು ಹೇಳುತ್ತಾರೆ:*

***"ನೀಲ್ ನನಗೆ ಹೇಳಿದ: 'ಹೌದು, ಅಲ್ಲಿ ಬೇರೆಯವರ ಗಗನ ನೌಕೆಗಳು ಇದ್ದವು, ಇದನ್ನು ಮುಚ್ಚಿಡಲು ಸಿ. ಐ. ಎ. ನೇ ನೇರ ಜವಾಬ್ದಾರಿ' "***

2013 ರ ತನ್ನ ಆಸಕ್ತಿಕರ ಭಾಷಣದಲ್ಲಿ ಟಿಮೋತಿ ಗುಡ್ ಇನ್ನೂ ವಿವರಗಳನ್ನು ಹೇಳಿದ್ದಾನೆ. ಇರಲಿ!

***ಹೀಗೆಯೇ ಇನ್ನು ಹಲವು ಅಧಿಕಾರಿಗಳು ಹೇಳಿಕೆ ಕೊಟ್ಟಿದ್ದಾರೆ. ಯು ಎಸ್. ಸರಕಾರವು ಇದನ್ನು ಬಹಿರಂಗ ಮಾಡದ ಕಾರಣ ಇವೆಲ್ಲಾ ಅನಧಿಕೃತ ಎನಿಸಿವೆ. ಯಾರೂ ಬೇಕಾದರೂ ಇವೆಲ್ಲಾ ಸುಳ್ಳು ಎಂದು ಮುಖ ತಿರುಗಿಸಬಹುದು.***

***ಅಮೇರಿಕನ್ ಸರಕಾರಕ್ಕೆ ಅದೇ ಬೇಕಾಗಿದ್ದು!***

| |
|---|
| ***ಚಂದ್ರನ ಮೇಲೆ ನಡೆದ 6ನೇ ವ್ಯಕ್ತಿಯಾದ ಗಗನಯಾತ್ರಿ ಡಾ. ಎಡ್ಗರ್ ಮಿಚೆಲ್ ಹೀಗೆ ಬರೆದಿದ್ದರ ದಾಖಲೆಯಿದೆ:*** |

***"ಹೌದು, ಅಲ್ಲಿ ಅಪಘಾತವಾದ ಯಾರದೋ ಗಗನ ನೌಕೆಗಳು, ಹೆಣಗಳೂ ಸಿಕ್ಕಿವೆ. ಖಂಡಿತಾ ನಾವು ಈ ವಿಶ್ವದಲ್ಲಿ ಏಕಾಂಗಿಗಳಲ್ಲ, ಅವರೆಲ್ಲಾ ನಮ್ಮ ಬಳಿ ಬಹಳ ಕಾಲದಿಂದ ಬರುತ್ತಲೇ ಇದ್ದಾರೆ. ಈ UFO ಗಳು ಸತ್ಯ, ಇದನ್ನು ತಿಳಿದ ಭೂಮಿಯಲ್ಲಿನ ಕೆಲವೇ ಭಾಗ್ಯವಂತರಲ್ಲಿ ನಾನೂ ಒಬ್ಬ!"***

## 3.3.3 ಚಂದ್ರನಲ್ಲಿ ಕಾಣಿಸಿದ ಕಟ್ಟಡಗಳು!

ಅಪೋಲೋ ಮಿಷನ್ನಿನ ಮೊದಲ ಲೋಗೊ / ಚಿನ್ಹೆಯು "ಸ್ಟೋನ್ ಹೆಂಜ್" ಆಗಿತ್ತಂತೆ (ಮೊದಲ ಅಧ್ಯಾಯದಲ್ಲಿ ಬರೆದಿದ್ದೇನೆ).. ಆಮೇಲೆ ಅದನ್ನು ಗ್ರೀಕ್ ದೇವ 'ಅಪೋಲೋ' ಎಂದು ಸರಕಾರದವರು ಕಾರಣ ಕೊಡದೇ ಬದಲಿಸಿದರಂತೆ...ಏಕೋ?

ಮೊದಲು ಬಿಡುಗಡೆ ಮಾಡದ , ಅಥವಾ ಸರಿಯಾಗಿ ವಿಮರ್ಶಿಸದ ಹಲವಾರು ಚಿತ್ರ ಮಾಹಿತಿಗಳು ಇದೀಗ ಬೆಳಕಿಗೆ ಬಂದಿವೆ. ಅವುಗಳ ವಿಶ್ಲೇಷಣೆ, ಟಿಪ್ಪಣಿ ತಜ್ಞರಿಂದ ಸಾಗಿದೆ.

ಒಂದು ವೆಬ್ ಸೈಟಿನಲ್ಲಿ ಚಂದ್ರನ ಚಿತ್ರಗಳು ಮತ್ತು ಮಾಹಿತಿಯಿವೆ. ಒಮ್ಮೆ ನೀವೇ ಓದಿ ನೋಡಿ:

http://www.unariunwisdom.com/strange-moon-surface-anomalies/

**ಜೀನ್ ಸೆರ್ನನ್** ಎಂಬ ಯಾತ್ರಿ ಚಂದ್ರಗ್ರಹಕ್ಕೆ ಹೋದ ಕೊನೆಯ ಪ್ರಯಾಣಿಕ. ಅವನು ಚಂದ್ರನ 'ಕಾಣದ ಹಿಂಭಾಗ' ( ಭೂಮಿಗೆ ಕಾಣದ ಇನ್ನೊಂದು ಮುಖದಲ್ಲಿ) ಹಲವು ಕಟ್ಟಡ, ಹೊಸ ಸೂಚನೆಗಳೂ ಇವೆ, ನಾವು ಅದನ್ನು ಪರೀಕ್ಷಿಸೋಣ ಎಂದಾಗ ನಾಸಾ ಸಂಸ್ಥೆ ಅಡ್ಡಗಾಲು ಹಾಕಿ ಬೇಡ ಎಂದಿತು.

ಇದೊಂದು ವೈಜ್ಞಾನಿಕ ಅನ್ವೇಷಣೆ ಮಾಡಲೆಂದೇ ಹುಟ್ಟಿರುವ, ಕೋಟ್ಯಂತರ ಡಾಲರ್ ಅದಕ್ಕಾಗಿಯೇ ಖರ್ಚು ಮಾಡುವ ಸಂಸ್ಥೆಯ ನ್ಯಾಯ ನೀತಿಯುತ ವರ್ತನೆ ಎಂದನಿಸುತ್ತೆಯೆ?

ಅಥವಾ ಅವರಿಗೆ ಅಲ್ಲೇನಿದೆ ಎಂದು ಚೆನ್ನಾಗಿ ಗೊತ್ತು, ಅದು ಸರಕಾರದ ರಹಸ್ಯ... ಅದಕ್ಕೇ ಎಲ್ಲರ ಬಾಯಿಗೆ ಬೀಗ ಅಂತಾಯಿತಲ್ಲ?

ಯಾಕೆ ಎಂಬುದನ್ನು ಮುಂದೆ ನೋಡುವಾ..

ಈಗ ಮತ್ತಿಷ್ಟು ದಾಖಲೆಗಳನ್ನು ನೋಡಿದ ತಜ್ಞರು ಮಾಡಿದ ವೈಜ್ಞಾನಿಕ ನಿರ್ಧಾರವನ್ನೆ ಕೇಳೋಣ:



ಒಂದು ಚಿತ್ರದಲ್ಲಿ ಪಿರಮಿಡ್ ಅಸ್ಪಷ್ಟವಾಗಿ ಕಂಡಿದೆ. ಇದು ಯಾರೂ ಮುಟ್ಟದ ಚಿತ್ರವಂತೆ.

ಅಲ್ಲಿ ಯಾರು ಯಾತಕ್ಕೆ ಕಟ್ಟಿದರು?. ಅದೂ ಭೂಮಿಯತ್ತ ತನ್ನ ತುದಿ ತೋರಿಸುತ್ತಿದೆಯಂತೆ..ಏನು ಮಾಡಲು? ಇಲ್ಲಿಯೂ ನಮ್ಮನ್ನು ಕಾಡಲು ಬಂತೆ ಪಿರಮಿಡ್ ರಹಸ್ಯ?




200 ಮೀ ಎತ್ತರದ ಪಿರಮಿಡ್ ಚಂದ್ರನ ಮೇಲೆ ಗೂಗಲ್ ಅರ್ಥ್ ಚಿತ್ರ!

(Google Moon co-ordinates are **20°48'45.54"N 25°59'50.89" W).**

ಯಾರೋ ಏನೋ ಕಟ್ಟಿದ್ದಾರೆ, ಹಳೇ ಕಟ್ಟಡವೇ? ಸಹಜವಾಗಿ ಕಲ್ಲು ಹೀಗಿರಲು ಸಾಧ್ಯವಿಲ್ಲ ಅಲ್ಲವೆ?



ಅಲ್ಲಿಯೂ ಯಾರೋ 'ಪೀಪಿಂಗ್ ಟಾಮ್' ನಮ್ಮನ್ನು ನೋಡಲು ಕಾಯುತ್ತಿದ್ದಾನಲ್ಲಾ?...ನಕ್ಷತ್ರ, ಉಲ್ಕೆ, ನಮ್ಮ ನೌಕೆ ಇತ್ಯಾದಿ ಅಲ್ಲವಂತೆ....ಹಾಗಾದರೆ?



ಖಂಡಿತಾ ಯಾರೋ ಕಟ್ಟಿದ ಬಂಕರ್/ ಶೆಡ್/ ಮಿಲಿಟರಿ ಕಟ್ಟಡದಂತಿದೆ...ಬಹಳ ಮೇಲಿನಿಂದ ತೆಗೆದ ಚಿತ್ರ...ಕಲ್ಲು ಬಂಡೆಯಲ್ಲ!




ಅಪೋಲೋ 11 ರಲ್ಲಿ ತೆಗೆದ ಅನ್ಯಗ್ರಹ ಜೀವಿಗಳ ಮಿಲಿಟರಿ ಬೇಸ್, ವೈಜ್ಞಾನಿಕ ಪ್ರಯೋಗಾಲಯವೋ ಏನೋ ಮೊದಲೇ ಇದೆ!







ಅಲ್ಲಿ ಯಾವುದೋ ಎತ್ತರವಾದ ಚಿಮಣಿಯೋ, ಭೂಗತ ಗಣಿಯ ಪೈಪೋ ಇದೆಯಲ್ಲಾ?... ಏನು ಮಾಡುತ್ತಿದ್ದಾರೆ ಚಂದ್ರನ ಒಳಗೆ?

(https://www.youtube.com/watch?v=G_O2IKT7oLE_)



ತ್ರಿಕೋನಾಕಾರದ ಗಗನನೌಕೆ ಚಂದ್ರನ ಸುತ್ತಲೂ ನಾವು ಹೋಗುವ ಮೊದಲೇ ಸುತ್ತುತ್ತಾ ಎಲ್ಲವನ್ನು ನೋಡುತ್ತಿದೆ? ಯಾರದು?.... ಸಾಮಾನ್ಯ ವಿಮಾನಗಳ್ಯಾವುವೂ ಅಲ್ಲಿ ಹಾರುವುದಿಲ್ಲ!!..NASA ಆರ್ಕೈವ್ ಚಿತ್ರ.

*[The Clementine Mission was] a photo reconnaissance mission basically to check out if someone was building bases on the moon that we didn't know about. Were they expanding they expanding them? . . . Of all the pictures I've seen from the moon that show possible structures, the most impressive is a picture of a miles wide recto-linear structure. This looked unmistakably artificial, and it shouldn't be there. As somebody in the space defence community, I look on any such structure on the moon with great concern because it isn't ours, there's no way we could have built such a thing. It means someone else is up there. (source)*

(ನಾಸಾ ಮತು ಸರಕಾರಿ ಏಜೆನ್ಸಿಗಳು ಚಂದ್ರನ ಚಿತ್ರ ಸರ್ವೆ ಮಾಡಲು ಒಮ್ಮೆ ಛಾಯಾಗ್ರಹಣಕ್ಕೆಂದೇ ಮಿಷನ್ ಮಾಡಿದವು. **ಕ್ಲೆಮೆಂಟೈನ್ ಮಿಷನ್...** ಈ ಬಗ್ಗೆ ಅದರ ಡೆಪ್ಯುಟಿ ಮ್ಯಾನೇಜರ್ ಶ್ರೀ ಬ್ರಾಂಡೆನ್ ಬರ್ಗ್ ಹೀಗೆ ಮೇಲಿದ್ದಂತೆ ಹೇಳಿದ್ದಾರೆ.

*ಯಾರೋ ನಮಗೆ ಗೊತ್ತಾಗದಂತೆ ತಮ್ಮ ಕೇಂದ್ರ ಕಟ್ಟುತ್ತಿದ್ದಾರೆಯೆ ಎಂಬ ಅನುಮಾನ ಬಂದಿತ್ತಂತೆ. ಹೀಗೆಲ್ಲಾ ಅಲ್ಲಿ ಇರಲೇ ಬಾರದು...ಖಂಡಿತಾ ಯಾರೋ ಕಟ್ಟಿದಂತಾ ಕೃತಕ ಕಟ್ಟಡಗಳು, ಇದು ಆತಂಕಕಾರಿ...ನಾವಂತೂ ಅಲ್ಲಿಗೆ ಹೋಗಿ ಇದನ್ನೆಲ್ಲಾ ಕಟ್ಟಿಲ್ಲ....ಯಾರೋ ಅಲ್ಲಿದ್ದಾರೆ.)*

***ಅಂದ ಮೇಲೆ ಚಂದ್ರನ ಮೇಲೊಂದು ಭೂಗಳ್ಳತನದ ಹಗರಣವೆ? ( ಚಂದ್ರಗಳ್ಳತನ?)***

## <u>ಭೂಮಿಗೆ ಬಂದ ಅನ್ಯಗ್ರಹಜೀವಿಗಳು: ಒಂದು ಅಧ್ಯಯನ:</u>

ಅಪೋಲೋ ಮಿಷನ್ 17ರ ನಂತರ ತಕ್ಷಣವೇ ಯಾನವನ್ನು ನಿಲ್ಲಿಸಲಾಯಿತು. 'ಬೇಕಾಗಿದ್ದೆಲ್ಲಾ ಸಿಕ್ಕಿತು, ನಿಲ್ಲಿಸಿದೆವು' ಎಂದರಂತೆ ನಾಸಾ.. 'ಏನು ಹುಡುಕಹೋಗಿದ್ದಿರಿ, ಏನು ಸಿಕ್ಕಿತು?' ಎಂದು ಅಮೆರಿಕನ್ ಪಬ್ಲಿಕ್ ಬಹಳ ಕಾಲ ಅವರನ್ನು ಪ್ರಶ್ನಿಸಿದ್ದಾರೆ.' ಅಲ್ಲಿ ಏಲಿಯನ್ನು (ಅನ್ಯಗ್ರಹಜೀವಿ)ಗಳಿರಲಿ ಇರಲಿ ಮನೆ ಮಾಡಿಕೊಂಡು' ಎಂದು ಬಿಟ್ಟುಬಿಟ್ಟರಾ? ಅಲ್ಲಿ ಪಿರಮಿಡ್ಡು ಇದೆ, ಅಲ್ಲಿ ಹಲವು ಬಗೆಯ ಕಟ್ಟಡಗಳಿವೆ. ಅಲ್ಲೊಂದು ಕಲ್ಲು- ಮನುಷ್ಯನ ತಲೆಬುರುಡೆಯ ರೂಪದಲ್ಲಿದೆ. ಅಲ್ಲಿರುವ ಕೆಲವಂತೂ ಯಾರೋ ಭೂಮಿಯ ಮೇಲೆ ನಿಗಾ ಇಡಲೆಂದೇ ಕಟ್ಟಿದಂತಿದೆ? ಎಂದೆಲ್ಲಾ ಪ್ರಶ್ನಿಸಿದ್ದಾಗಿದೆ. ಯಾವುದಕ್ಕೂ ಜಗ್ಗದ ಈ ಸರಕಾರಿ ಏಜೆನ್ಸಿ NASA...

ಅವರು ನಿಮಗೆ ಏನಾದರೂ ಸಂದೇಶ ಕೊಟ್ಟರೆ?...ಇಲ್ಲಿಗೆ ಇನ್ನು ಮೇಲೆ ಬರಬೇಡಿರೆಂದು? ಎಂದು ಅವರನ್ನು ಕೇಳುವವರಿದ್ದಾರೆ...

ನೇರವಾಗಿ ನಾಸಾಗೆ ಸಂದೇಶ ಕೊಟ್ಟು -

**"ಇಲ್ಲಿಗೆ ಬರಬೇಡಿ, ಬಂದರೆ ಗತಿ ನೆಟ್ಟಗಾಗೊಲ್ಲ. ನಿಮಗೆ ಬೆಳದಿಂಗಳು ಸಿಗುತ್ತಿದೆಯಲ್ಲಾ, ಅದನ್ನೂ ನಾವು ದೊಡ್ಡ ಗೋಡೆ ಕಟ್ಟಿ ಮರೆ ಮಾಡಿಬಿಟ್ಟರೆ ಏನು ಮಾಡುವಿರಿ?...ನಿಮ್ಮನ್ನು ನಾವು ಇಲ್ಲಿಂದಲೇ ಉಡಾಯಿಸಿಬಿಟ್ಟರೆ**?" ಎಂದೆಲ್ಲಾ ಆ ಜೀವಿಗಳು ಬೆದರಿಸಿದ ಅಂತೆ-ಕಂತೆಗಳ ವ್ಯಾಖ್ಯಾನ ವೈಜ್ಞಾನಿಕ ವಲಯದಲ್ಲೇ ನಡೆದಿದೆಯಂತೆ...

https://www.gaia.com/lp/content/what-did-nasa-really-discover-on-the-moon/

<u>**ಎಲ್ಲವನ್ನು ನೀವು ನಂಬಿ ಎಂದು ನಾನು ಹೇಳುತ್ತಿಲ್ಲ... ಎಲ್ಲಾ ಬಗೆಯ ಚಿತ್ರಣ, ಬರಹ ಅಂತರ್ಜಾಲ ಮಾಧ್ಯಮದಲ್ಲಿ ಬಂದಿದೆ, ನಿಮಗೆ ಕೊಟ್ಟಿದ್ದೇನೆ... ನಂಬದಿದ್ದರೆ ಏನು ಮಾಡುವಿರಿ, ನಿಮಗೇ ಬಿಟ್ಟಿದ್ದು!**</u>

ಇನ್ನು ಈ ಕಂತಿನ ಕೊನೆಯದಾಗಿ- ಚಂದ್ರನ ಮೇಲೆ ಸಿಕ್ಕಿತೆನ್ನಲಾದ ಮೂರು ಕಣ್ಣಿನ ಹೆಣ್ಣು ಜೀವಿಯ "ಹೆಣ?"ದ ಘಟನೆಯೊಂದು ವಿಜ್ಞಾನಿಗಳನ್ನೂ, ಅನ್ಯಗ್ರಹ ಜೀವಿ-ಪ್ರಿಯರನ್ನೂ ಭಾಧಿಸಿದೆ.

ಅದನ್ನು ನೋಡುವಾ:-

http://www.viewzone.com/monalisa.html

**ಸಾರ್ವಜನಿಕರಿಗೆ ತಿಳಿದಂತೆ ಅಪೋಲೋ 17ಕ್ಕೇ ಚಂದ್ರಯಾನ ಪರಿಸಮಾಪ್ತಿಯಾದರೂ ರಹಸ್ಯವಾಗಿ ಅನ್ಯಗ್ರಹ ಜೀವಿಗಳನ್ನು ಕಾಣಲು 18-19 ಮತ್ತು 20 ನಂಬರಿನ ಉಪಗ್ರಹಗಳನ್ನು ಹಾರಿಸಲಾಯಿತು ಎಂದು ನಂಬಲರ್ಹ ಗುಟ್ಟುರಟ್ಟುಗಾರ (ವಿಸೆಲ್ ಬ್ಲೋಯರ್) – ವಿಲಿಯಮ್ ರಟ್ಲೆಜ್ ಎಂಬವ 2007 ರಲ್ಲಿ ಈ ವಿಷಯವನ್ನು ಬಹಿರಂಗ ಪಡಿಸಿದ.**

(**https://www.ufoinsight.com/mona-lisa-alien-girl-found-moon-1976/**)

**https://www.youtube.com/watch?v=FLtCAmrPbtc**

*"ಆ ನೌಕೆ ಚಂದ್ರನ ಹಿಮ್ಮುಖ ( ನಮಗೆ ಕಾಣದ ಮುಖ) ದಲ್ಲಿ ಇಳಿಯಿತು. ಅಲ್ಲಿ ಅನ್ಯಗ್ರಹ ಜೀವಿಗಳ ಕಾಲೋನಿ/ ಕೇಂದ್ರಗಳನ್ನು ಕಂಡಿದ್ದಲ್ಲದೇ ಅಲ್ಲೊಬ್ಬ ಹೆಣ್ಣಿನ ದೇಹವು ದೊರಕಿತು.* ***<u>ಬದುಕಿಯೂ ಇಲ್ಲದ, ಸತ್ತೂ ಹೋಗಿರದ– ಮಧ್ಯದ ಘಟ್ಟದಲ್ಲಿದ್ದ</u>*** *ಆಕೆಯನ್ನು ಅಪೋಲೋ 20 ರವರು 'ಮೋನಾಲೀಸಾ' ಎಂದು ಹೆಸರಿಟ್ಟರು. ಆಕೆಯು 5.5 ಅಡಿ ಎತ್ತರವಿದ್ದು ಮಾನವಳ "ತರಹ" ಕಾಣುವಂತಾ ಜೀವಿ. ಆಕೆಗೆ ದೇಹದಲ್ಲಿ ಕೂದಲು, ಲಿಂಗ ಮತ್ತು 6 ಬೆರಳಿನ ಹಸ್ತಗಳಿದ್ದವು ( ಅವರ ಸಂಖ್ಯಾ ಶಾಸ್ತ್ರವು 12 ಬೇಸ್ ಗೆ ಇದ್ದೀತು, ನಮ್ಮದು 10 ಇರುವ ತರಹ). ಆಕೆಯ ಕಂಗಳು ಮತ್ತು ಬಾಯಿಗೆ ಕಟ್ಟಿದಂತೆ ಪೈಲೆಟ್ಟಿಂಗ್ ಸಾಧನಗಳಿದ್ದವು. ನಾವು ಅದನ್ನು ಕತ್ತರಿಸಿದೆವು. ಆಕೆ ಬಟ್ಟೆ ಉಟ್ಟಿರಲಿಲ್ಲ. ಆಕೆಯ ಬಾಯಿಯ ಬಳಿ ರಕ್ತದ ತರಹ ದ್ರವ ಹೆಪ್ಪುಗಟ್ಟಿತ್ತು. ಆಕೆಯ ದೇಹಕ್ಕೆ ಚರ್ಮಕ್ಕಂಟಿದ ಹಾಗೆ ಪಾರದರ್ಶಕ ಫಿಲಮ್ ಒಂದನ್ನು ತೊಡಿಸಲಾಗಿತ್ತು. ಅಲ್ಲೇ ಇನ್ನೂ ಒಂದು ದೇಹ ಸಿಕ್ಕಿತು, ಆದರೆ ಅದು ನಾಶವಾಗಿ ಸತ್ತಿತ್ತು. ಬರೇ ತಲೆ ಮಾತ್ರ ಸಂಗ್ರಹಿಸಿದೆವು. ಮೋನಾಲಿಸಾ ಜೀವಂತ ಎಂದು ಟೆಲಿಮೆಟ್ರಿ ಪರೀಕ್ಷೆಗಳು ಬಯಲು ಪಡಿಸಿದವು... ಆಕೆಯನ್ನು ಭೂಮಿಗೆ ತಂದು ನಮ್ಮವರಿಗೆ ಒಪ್ಪಿಸಿದೆವು. ಆಕೆ ಅವರ ಬಳಿಯೇ ಇದ್ದಾಳೆ, ಭೂಮಿಯ ಮೇಲೆಯೇ ಇದ್ದಾಳೆ!"* ಇದು ಒಂದು ವರದಿ.

*"ಆಕೆಯ ಹಣೆಯ ಮೇಲೆ ಮೂರನೇ ಚಿಕ್ಕ ಮುಚ್ಚಿದ ಕಣ್ಣು ಮತ್ತು ರೆಪ್ಪೆಯಂತಿತ್ತು. ಅದನ್ನು ಆಕೆ ಬೇಕಾದಾಗ ತೆರೆಯಬಲ್ಲಳೋ ಏನೋ?"* ಎಂದು ಇನ್ನೊಂದು ವರದಿ ಹೇಳುತ್ತದೆ.

**(ಹಿಂದೂ ಧರ್ಮದಲ್ಲಿ ಭ್ರೂ (ಹಣೆ) ಮಧ್ಯದಲ್ಲಿ ಮೂರನೆಯ ಕಣ್ಣು ಜಾಗೃತವಾಗಬಲ್ಲುದು , ಅಲ್ಲೇ ಜ್ಞಾನ ಚಕ್ಷು ಇದೆ, ಅದರ ಮೇಲೆ ಧ್ಯಾನ ಮಾಡಿ, ಅದು ಜಾಗೃತವಾಗಿ ಜ್ಞಾನವನ್ನು ಕೊಡುತ್ತದೆ ಎನ್ನುವುದು ಇದಕ್ಕೇ ಇರಬಹುದೆ?)**



**ಮೂರನೆಯ ಕಣ್ಣುಳ್ಳ ಹಣೆ! ( ತ್ರಿನೇತ್ರಧಾರಿಣಿ?)..ಹಣೆ ಮೇಲೆ ಬೋರೆ ಬಂದಿಲ್ಲ, ಅಂಟು ಹಾಕಿ ಮುಚ್ಚಿದ್ದಾರೆ, ರಪ್ಪೆಗಳು ಹಾಗಿವೆ!**



**ನೋಡಿ, ಓದುಗರೆ, ಇವೆಲ್ಲಾ ಸಮಾಜದ, ವೈಜ್ಞಾನಿಕ ಸಮುದಾಯದ, ಗಗನಯಾತ್ರಿಗಳಿಗೆ ಸಂಬಂಧಿತವಾದವರು ಹಲವಾರು ಮುಖ್ಯ ಪ್ರಶ್ನೆಗಳನ್ನು, ಸವಾಲುಗಳನ್ನು ಅಮೆರಿಕದ NASA ಸಂಸ್ಥೆಯ ಬಗ್ಗೆ ಎತ್ತಿದ್ದಾರೆ. ಅದಕ್ಕೆಲ್ಲಕ್ಕೂ ಅವರು ಬರೇ ನಕಾರಾತ್ಮಕವಾದ ಪೊಳ್ಳು ಉತ್ತರಗಳನ್ನೇ ನೀಡುತ್ತಾ ಜನರ ಮಾಹಿತಿಗೆ ಅಡ್ಡಗೋಡೆ ಕಟ್ಟುವಂತೆ ಅಮೇರಿಕನ್ ಸರಕಾರದ ಕೈಬೊಂಬೆಯಂತೆ ವರ್ತಿಸಿದ್ದಾರೆ ಎಂದು ಮೇಲ್ನೋಟಕ್ಕೆ ಕಾಣುತ್ತಿದೆ. ಇದು ನನ್ನೊಬ್ಬನ ಅಭಿಪ್ರಾಯವೂ ಅಲ್ಲ.**

**ಇವೆರೆಡರಲ್ಲಿ ಯಾವುದನ್ನು/ ಯಾರನ್ನು ನಂಬಬೇಕು ಎಂಬುದು ನಿಮಗೇ ಬಿಟ್ಟಿದ್ದು... ನನ್ನ ಬಲವಂತವೂ ಇಲ್ಲ, ಅಥವಾ ಯಾವುದೇ ಸರಕಾರದ ಮೇಲೆ ಗೂಬೆ ಕೂರಿಸುವ ಉದ್ದೇಶವೂ ಇಲ್ಲಿಲ್ಲ...**

# 6ನೇ ಕಂತು:

## ಅಧ್ಯಾಯ 4. ಗಗನ ನೌಕೆಗಳು- ವಿವಿಧ ಬಗೆ ಮತ್ತು ತಂತ್ರಜ್ಞಾನ- ವರ್ಮ್ ಹೋಲ್ ಮತ್ತು  ಅನ್ಯ ಲೋಕ ಪ್ರಯಾಣ

### 4.1 ವಿಮಾನಗಳು

ಗಾಳಿಯಲ್ಲಿ ಹಾರಬೇಕಾದರೆ ಗುರುತ್ವಾಕರ್ಷಣ ಶಕ್ತಿಯನ್ನು ಮೀರಬೇಕು. ಅಂತಾ ದೊಡ್ಡ  ವೇಗ ಮತ್ತು ಮೊಮೆಂಟಮ್ (ಆವೇಗ)  ವನ್ನು ಏರೋಡೈನಮಿಕ್ ತಂತ್ರಜ್ಞಾನದ ಪ್ರಕಾರ ರೆಕ್ಕೆಗಳ ಮೂಲಕ ಲಿಫ್ಟ್ ಆಫ್ ಮಾಡಿ ಸಾಧಿಸಬೇಕು..



ಈಗಿನ ದೊಡ್ಡ ಆಧುನಿಕ ಮಾಡೆಲ್ -

**ಸೂಪರ್ ಸೋನಿಕ್ ವಿಮಾನ**

-ವಿಮಾನಗಳು 40,000 ಅಡಿ ಎತ್ತರದಲ್ಲಿ 900 km/ h  ವೇಗದಲ್ಲಿ ಹಾರಬಹುದು. ಸೂಪರ್‌ಸಾನಿಕ್ ಎನ್ನುವ ವಿಶೇಷ ವಿಮಾನಗಳು 1500 ರ ವರೆಗೂ ಹೋಗಬಹುದು...ವಿಮಾನಗಳು ನೇರವಾಗಿ ಭೂಮಿಗೆ ಸಮಾನಾಂತರವಾಗಿ ಹಾರುತ್ತವೆ.. ಇಳಿಯುವಾಗಲೂ ನಿಧಾನವಾಗಿ ಸ್ವಲ್ಪಸ್ವಲ್ಪವೇ ಇಳಿದರೆ ಪ್ರಯಾಣಿಕರು ಕ್ಷೇಮ... ಹುಚ್ಚಾಪಟ್ಟೆ ಹಾರಲು ಅಥವಾ ಇಳಿಯುವಾಗ ಮೂಗು ಕೆಳಗೆ ಮಾಡಿ (ನೋಸ್ ಡೈವ್) ಇಳಿಯಲು ಹೋದರೆ ವಾಯು ಒತ್ತಡ ತೀವ್ರವಾಗಿ ಪ್ರಯಾಣಿಕರು ಅಸ್ವಸ್ಥರಾಗಿ ಸಾಯಲೂಬಹುದು, ಅಪಘಾತವೂ ಆಗಬಹುದು.  ಇವೆಲ್ಲಾ ನಮ್ಮ ಈಗಿನ ವಿಜ್ಞಾನದ ಇತಿಮಿತಿಗಳು.( ಇತ್ತೀಚೆಗೆ ವಾಯು ಒತ್ತಡ ಬದಲಿಯಾಗಿ ಆದ ಜೆಟ್ ವಿಮಾನದ ಪ್ರಯಾಣಿಕರ  ಅಸ್ವಸ್ಥ ಸ್ಥಿತಿ ಸುದ್ದಿಯಲ್ಲಿತ್ತು!)

ಆದರೆ...

## 4.2 ಹಾರುವ ತಟ್ಟೆಗಳು ಅಥವಾ ಗಗನ ನೌಕೆಗಳು? ಆದರೆ ನಾವು ಚರ್ಚಿಸುತ್ತಿದ್ದ ಹಾರುವ ತಟ್ಟೆಗಳು,

ಅನ್ಯಗ್ರಹದ ನಮೂನೆಗಳು ಹೀಗಲ್ಲವಲ್ಲ.



*Huge motherships carry flying saucers inside.*




**ಅದರದೇ ಬೇರೆ ವಿಜ್ಞಾನ, ಅದರದೇ ಬೇರೆ ನಮಗೆ ತಿಳಿಯದ ಎಂಜಿನಿಯರಿಂಗ್, ನಮ್ಮಲ್ಲಿ ಸಿಗದ ಅಥವಾ ಗೊತ್ತಿಲ್ಲದ ಇಂಧನದ ಬಗೆ!**

**ಅದಕ್ಕೇ ಆ ನೌಕೆಗಳು ನಮ್ಮ ವಿಮಾನಕ್ಕಿರುವ ಎಲ್ಲೆಯನ್ನು ಮೀರಿ ಹಾರಬಲ್ಲವು, ಸಾಗಬಲ್ಲವು. ಹೇಗಂದರೆ ಹಾಗೆ ಮ್ಯಾಜಿಕ್ಕಿನಂತೆ ಕುಣಿಯಬಲ್ಲವು! ದೇಶ- ಕಾಲದ ಮಿತಿಯನ್ನು ಲೆಕ್ಕಿಸದೇ ಗೆಲ್ಲಬಲ್ಲ ಪವಾಡಸದೃಶ ಹಕ್ಕಿಗಳು ಇವು!**

**ಅವರು ಈ ಭೌತಶಾಸ್ತ್ರದ (ಫಿಸಿಕ್ಸ್) ಗಡಿಯ "ಹೊರಗೆ" ಕೆಲಸ ಮಾಡುತ್ತಿದ್ದಾರೆ ಎಂದಾಯಿತು.**

http://www.ufohowto.com/index.htm

**4.3 ಸ್ಪೇಸ್ ಶಿಪ್ ಅಂದರೆ....**

ಇದರ ತಂತ್ರಜ್ಞಾನದ ಬಗ್ಗೆ ನಾನು ಅಂತರ್ಜಾಲದಲ್ಲಿ ತಜ್ಞರು ತಿಳಿಸಿರುವ ವಿಧಾನಗಳ ಕೆಲವು ಪದಗುಚ್ಚಗಳನ್ನು ಉಪಯೋಗಿಸಿ ಹೇಳುವೆ, ನೋಡುವಾ ನಮಗೆಷ್ಟು ಅರ್ಥವಾಗುವುದೆಂದು...

1. ನಮಗೆ ಹಲವು ಅನ್ಯಗ್ರಹ ಜೀವಿಗಳು ಸಂಧಿಸಿದವರ (**Contactee** ಎನ್ನುತ್ತಾರೆ) ಹೇಳಿಕೆಗಳಿಂದ ಕಂಡು ಬರುವುದೆಂದರೆ":- ಈ ವಾಹನಗಳ ವಸ್ತುಗಳು ನಮ್ಮ ಭೂಮಿಯಲ್ಲಿ ಸಿಗುವ/ತಯಾರು ಮಾಡುವ ಯಾವುದೇ ಮಿನೆರಲ್, ಮೆಟಲ್ – ಲೋಹ ಅಥವಾ ಮಿಶ್ರಲೋಹ ಅಲ್ಲವಂತೆ. ಅವು ಅವರವರ ಗ್ರಹದ ಸಹಜ ಅಥವಾ ಕೃತಕ ಲೋಹಗಳು.
ಉದಾಹರಣೆಗೆ ರೋಸ್ವೆಲ್ ಘಟನೆಯಲ್ಲಿ( ಅಧ್ಯಾಯ 5 ರಲ್ಲಿ ಹೇಳುವೆ) ಸಿಕ್ಕ ಅವಶೇಷಗಳ ರಹಸ್ಯ ಪ್ರಯೋಗಾಲಯದ ರಿಪೋರ್ಟಿನಲ್ಲಿ ಈ ವಸ್ತುಗಳ ಕೆಮಿಕಲ್ ಮತ್ತು ಐಸೊಟೋಪ್ ಸಂಖ್ಯೆಗಳು ನಿರ್ಧರಿತವಾಗಲಿಲ್ಲ, ಅಂದರೆ "ಗುರುತು" ಸಿಕ್ಕಲಿಲ್ಲ! ಅದಕ್ಕೇ ಈ ವಸ್ತುಗಳೂ, ತಮಗೆ ಶಕ್ತಿ ನೀಡುವ ವಿಶೇಷ **ಎಲೆಕ್ಟ್ರೋ ಮ್ಯಾಗ್ನೆಟಿಕ್** ಇಂಧನ ತಂತ್ರಜ್ಞಾನದ ದೆಸೆಯಿಂದ ( ಭೂಮಿಯಲ್ಲಿ ದೊರೆಯದಂತಾ ಆಧುನಿಕ ವಿಧಾನದ್ದು) ನಮ್ಮ ಗ್ರಹದ ಗುರುತ್ವಾಕರ್ಷಣ ಶಕ್ತಿಗೆ (**gravity**) ಒಳಪಡುವುದಿಲ್ಲ. ಇದರ ಫಿಸಿಕ್ಸೇ ನಮಗೆ ತಿಳಿದ ಭೌತ ಶಾಸ್ತ್ರಕ್ಕಿಂತಾ ಬೇರೆ ರೀತಿಯಲ್ಲಿ ಕೆಲಸ ಮಾಡುತ್ತದೆ. ಅದಕ್ಕೇ ಈ ಗಗನನೌಕೆಗಳು ಗಾಳಿಯಲ್ಲಿ ವಿಚಿತ್ರ ರೀತಿಯ ಸರ್ಕಸ್ ಮಾಡುವುವು, ಭೂಮಿಯ ಮೇಲೆ ಇಳಿಯದೇ ಗಾಳಿಯಲ್ಲಿ ಸ್ಥಿರವಾಗಿ ನಿಲ್ಲುವುದು, ನಮ್ಮಲ್ಲಿನ ವಿಮಾನಗಳಿಗೆ ಊಹಿಸಲಾಗದ ತೆರದಲ್ಲಿ ಟೇಕ್-ಆಫ್ ವೇಗದ ಮಿತಿಯಿಲ್ಲದೇ ಸೊನ್ನೆಯಿಂದ ಸಹಸ್ರಾರು ಮೈಲಿ ವೇಗಕ್ಕೆ ಒಮ್ಮೆಲೇ ಬದಲಿಸಿಕೊಂಡು ಹಾರಿ ಮಾಯವಾಗಬಲ್ಲುವು.
2. ಅಲ್ಲದೇ ಬಹಳಷ್ಟು ಇಂತಾ ವಾಹನಗಳಿಗೆ ಮೂರಕ್ಕಿಂತಾ ಹೆಚ್ಚಿನ ಫೇಸ್ ಎಲೆಕ್ಟ್ರಿಸಿಟಿಯನ್ನು ಸ್ವಯಂ ತಯಾರು ಮಾಡಿಕೊಳ್ಳುವ ಶಕ್ತಿಯಿದೆ, ಕೆಲವೋ **ಎಲೆಕ್ಟ್ರೋ ನ್ಯುಕ್ಲಿಯರ್** ವಿಧಾನಗಳದ್ದಾಗಿವೆ. ಇನ್ನು ಕೆಲವಕ್ಕೆ ರಿಮೋಟ್ ಆಗಿ ಅಂತರಿಕ್ಷದಲ್ಲಿ ದೂರದಲ್ಲಿರುವ ಮದರ್ ಶಿಪ್ (ತವರು ನೌಕೆ) ಬೇಕಾದ ಇಂಧನಶಕ್ತಿ ಮತ್ತು ನ್ಯಾವಿಗೇಶನ್ ಮಾರ್ಗದರ್ಶನ ಕೊಡಿಸುತ್ತದೆ... ಹಾಗಾಗಿ ಅವರು ನಮಗಿಂತ ಸಾವಿರ ಪಟ್ಟು ವೇಗದಲ್ಲಿ ಸಾಗಬಲ್ಲ ಮತ್ತು ನಮ್ಮ ಮೆಂಟಲ್ ಪ್ರತಿಕ್ರಿಯೆಯನ್ನು ಮೀರಬಲ್ಲವರಾಗಿದ್ದು ಆ ವಾಹನಗಳನ್ನು "**ಹಿಂಬಾಲಿಸಲು, ಹಿಡಿಯಲು ಅಥವಾ ಹೊಡೆಯಲು**" ನಾವು ಅಶಕ್ತರಾಗಿದ್ದಂತೆ ವರದಿಗಳಾಗಿವೆ. ಕೆಲವೊಮ್ಮೆ ಅವರು ನಮ್ಮ ಎಲೆಕ್ಟ್ರಿಕ್ ಶಕ್ತಿ, ಕೆಲಸ ಮಾಡುತ್ತಿರುವ ಸರ್ವೋಪಕರಣಗಳನ್ನೂ ತಮ್ಮ ಬಳಿಯಿರುವ ಕಿರಣಗಳ ಮೂಲಕ ಇಲ್ಲವೇ ಮೆಂಟಲ್ ಸುಪ್ರಿಮೆಸಿಯಿಂದ (**ಮಾನಸಿಕವಾಗಿ ಸಬಲ ಸಮೂಹ ಸಮ್ಮೋಹನ ಶಕ್ತಿಯಿಂದ**) ಒಮ್ಮೆಲೇ ಬಂದ್ ಮಾಡಿಬಿಡುತ್ತಾರೆ. ನಾವು ಆಗ ಗರ ಬಡಿದಂತೆ ಅವರು ಬಿಡಿಸುವವರೆಗೂ ಏನೂ ಮಾಡಲಾಗದೇ ಶಿಲೆಯಂತೆ ನಿಲ್ಲಬೇಕಾಗುತ್ತದೆ. ನಮ್ಮ ವಿಮಾನ ಮತ್ತು ಅಸ್ತ್ರ, ಉಪಕರಣ ಎಲ್ಲವೂ ಅವರ ಮುಂದೆ ಆ ಕ್ಷಣದಲ್ಲಿ ಸ್ತಬ್ಧವಾಗುತ್ತದೆ. (***ಮಕ್ಕಳು "ಸ್ಟ್ಯಾಚೂ!" ಅಂತಾ ಆಟವಾಡುವಾಗ ಹಾಗೆ ಹೇಳಿಸಿಕೊಂಡವನು ಚಲನೆಯಿಲ್ಲದೇ ನಿಲ್ಲುವುದಿಲ್ಲವೇ, ಹಾಗೆ...ಮೈಂಡ್ ಕಂಟ್ರೋಲ್ ಮಾಡಿಬಿಡುತ್ತಾರೆ!***)
3. **A Space woman speaks by Rolf Telano (https://galactic.no/rune/rolftelano.htm)**

   ಪುಸ್ತಕದಲ್ಲಿ ಒಬ್ಬ ಅನ್ಯಗ್ರಹ ಹೆಣ್ಣೊಂದು ನೇರವಾಗಿ ಹೇಳಿಕೆ ಕೊಟ್ಟಿದ್ದಿದೆ: "ನಮ್ಮಲ್ಲಿ ಏಳು ಬಗೆಯ ಅಂತರಿಕ್ಷ ವಿಮಾನಗಳಿವೆ. ಅದರಲ್ಲಿ ಐದರಲ್ಲಿ ಸಿಬ್ಬಂದಿಯಿರುತ್ತಾರೆ, ಇನ್ನೆರೆಡೂ ಬರೇ ರೋಬೋಟ್ ಕ್ರಾಫ್ಟುಗಳು. ನೀವು ಭೂಮಿಯ ಆಗಸದಲ್ಲಿ ನಿಮಗೆ ಕಾಣುವುದೆಲ್ಲಾ ನಮ್ಮ ಸಾಮಾನ್ಯ ವಿಮಾನಗಷ್ಟೇ. ಮಿಕ್ಕವು ನಿಮ್ಮ ದೃಷ್ಟಿಗೆ ಸಿಗದಂತಾ ಆಯಾಮ (ಮೂರಕ್ಕಿಂತಾ ಹೆಚ್ಚಿನ

ಡೈಮೆನ್ಷನ್!) ದಲ್ಲಿರುತ್ತದೆ. ನಮ್ಮ ಹಲವು ವಿಮಾನಗಳು ಮಾನಸಿಕ ಇಂಧನದಿಂದ ಅಂದರೆ ನಾವು ಕುಳಿತಲ್ಲೇ ಮನಸ್ಸು ಮಾಡಿದ್ದನ್ನು ಅರಿತುಕೊಂಡು ಸ್ವಯಂ ಚಲಿಸಬಲ್ಲವು. ಅತ್ಯವಶ್ಯ ಆದರೆ ಮಾತ್ರ ಪೈಲೆಟ್ ತಾನೇ ಸ್ವತಃ ಮ್ಯಾನುಯಲ್ ನಿಯಂತ್ರಣಕ್ಕೆ ಕೈ ಹಚ್ಚುತ್ತಾನೆ. ಆದರೆ ಮೆಂಟಲ್ ಡೈರೆಕ್ಷನ್ಸ್ ಒಮ್ಮೆಲೇ immediately ಕೆಲಸ ಮಾಡುತ್ತವೆ. ದೈಹಿಕವಾಗಿ ಮಾಡುವುದೆಲ್ಲಾ ನಿಧಾನ ಅಲ್ಲವೆ, ಹಾಗಾಗಿ.

ನಿಮಗೆ ಕಾಣುವ ಸಣ್ಣ ವಾಹನಗಳೆಲ್ಲಾ ನಮ್ಮ ಮದರ್ ಶಿಪ್ ನಲ್ಲಿ ಲಂಗರು ಹಾಕಿರುತ್ತವೆ. ಬೇಕಾದಾಗ ಟೂರಿಸ್ಟ್ ಕ್ರಾಫ್ಟ್, ಲ್ಯಾಬ್ ಕ್ರಾಫ್ಟ್ ...ಹೀಗೆ ನಾವು ಅಲ್ಲಿಂದ ಅವನ್ನು ಮಾನಸಿಕವಾಗಿ ರಿಲೀಸ್ ಮಾಡುತ್ತೇವೆ. ಕೆಲವೆಲ್ಲಾ ನಮ್ಮಿಂದ ಅಲ್ಲಿಂದಲೇ ಕಂಟ್ರೋಲಿನಲ್ಲಿರುತ್ತವೆ. ತಮ್ಮ ಕೆಲಸ ಮುಗಿಸಿಕೊಂಡು ಅಲ್ಲಿಗೇ ಹಿಂತಿರುಗುತ್ತವೆ.(ಈಗೀಗ ನಾವು ಡ್ರೋನ್ ಟೆಕ್ನಾಲಜಿಯಲ್ಲಿ ಅಂಬೆಗಾಲಿಡುತ್ತಿದ್ದೇವೆ, ಅದೂ ಅವರೇ ಹೇಳಿಕೊಟ್ಟದ್ದೋ?...ಮುಂದೇ ನೋಡುವಾ)

4. ಮೇಲೆ ಹೇಳಿದ ಪುಸ್ತಕದಲ್ಲಿ ಹಲವಾರು ಬಗೆಯ ಗಗನ ನೌಕೆಗಳೂ, ಅವು ಮಾಡುವ ಕರ್ತವ್ಯಗಳೂ ಪಟ್ಟಿ ಮಾಡಿದ್ದಾರೆ. (ಕೆಲವೇ ಚಿತ್ರಗಳು ಇಲ್ಲಿ ಹಾಕಿದ್ದೇನೆ, ಮಿಕ್ಕಿದ್ದನ್ನು ಹೆಚ್ಚಿನ ವಿವರಗಳಿಗೆ ಅಲ್ಲೇ ಓದಿಕೊಳ್ಳಿ)



ನಿಮಗೆ ಇಂತಾ ಪ್ರಬಲವಾದ ಬೌದ್ಧಿಕ/ ಮಾನಸಿಕ ಶಕ್ತಿ ಮತ್ತು ನಿಯಂತ್ರಣ ಹೇಗೆ ಬಂದಿತು ಎಂಬ ಪ್ರಶ್ನೆಗೆ ಇಲ್ಲಿ ಕೆಳಗಿನ ಚಿತ್ರವನ್ನು ಅನ್ಯಗ್ರಹ ಜೀವಿ ಕೊಟ್ಟಿದೆಯಂತೆ., "**ಮಾನವರಿಗೂ ಈ ಶಕ್ತಿಯಿದೆ, ನೀವು ಬೆಳೆಸಿಕೊಂಡಿಲ್ಲ** " ಎಂದು ಪ್ರತ್ಯುತ್ತರ. ಅಂದಹಾಗೇ ಮೇಲಿನದು ಹಿಂದೂ ಸಿದ್ಧಾಂತದ ಪುಸ್ತಕವೂ ಅಲ್ಲ!!.ಇಲ್ಲಿ ಚಕ್ರ, ಕುಂಡಲಿನಿ ತಂತ್ರಶಕ್ತಿ ಹೋಲಿಕೆ ಕಂಡರೆ ಅಚ್ಚರಿಯಿಲ್ಲ!!



<< ಮಾನಸಿಕ ಶಕ್ತಿಯ ಹೆಚ್ಚಳ ಮತ್ತು ದಿವ್ಯಜ್ಞಾನದ ಅನಾವರಣ

ಈ ವಿವರವನ್ನು ಕೊಟ್ಟಾಕೆ ವೀನಸ್ ಅಥವಾ ಶುಕ್ರಗ್ರಹದವಳು. ನಮ್ಮ ವಿಜ್ಞಾನಿಗಳು ಶುಕ್ರನಲ್ಲಿ ಜೀವಿಗಳಿಲ್ಲ, ಅಲ್ಲಿ ಜೀವ ಅಸಾಧ್ಯ ಎನ್ನುತ್ತಾರಲ್ಲ ಎಂಬ ಪ್ರಶ್ನೆಗೆ ಇಲ್ಲಿದೆ ಜವಾಬು...

ಓದಿ ಇಂಗ್ಲೀಷಿನಲ್ಲೇ ಒರಿಜಿನಲ್:

**The planet which you call *Venus*)* is my home, although do not regard myself as a "native" since my people did not originate here.** )*"My present home is not on the Venus you see, but on a higher frequency level world which is somewhat larger than the "Venus" which you know...- see later in this book. Rø-rem.)

**Your scientists may tell you that life on this planet is impossible, because the Venusian atmosphere is unsuitable for life. Actually, conditions on the surface of the planet do not concern us, as will be explained later. The planet does, however, teem with life forms of every sort. As a matter of fact, all of the planets and their moons contain life of some sort. The tests which your astronomers have made, reached no further than the stratosphere of the various planets, which give no indication as to the conditions on the surface a hundred miles or so below. These same tests made on your own stratosphere would indicate that neither are the chemical and temperature conditions suitable for life.**

ಹಾಗೇ ಈ ಜೀವಿಗಳು ಮಂಗಳ ಅಥವಾ ಶುಕ್ರನಿಗೆ ನಾವು ಹೋಗಿ ನೋಡಿದರೂ ಕಾಣದಿದ್ದಕ್ಕೆ ಕಾರಣ :

ಅವು ನಮ್ಮ 3 dimensional world ಗಿಂತಾ ಹೆಚ್ಚಿನ ಆಯಾಮ ದಲ್ಲಿವೆ, 4,5 6 ಹೀಗೆ ಹೆಚ್ಚಿನ dimensions ಇರುವುದನ್ನು ನಮ್ಮ ವಿಜ್ಞಾನವೇ ಒಪ್ಪಿಕೊಳ್ಳುತ್ತದೆ... 3ಕ್ಕಿಂತಾ ಹೆಚ್ಚಿನದು ನಮ್ಮ ಕಣ್ಣಿಗೆ ಕಾಣುವುದಿಲ್ಲ. ಅಷ್ಟೇಕೆ, 3-D ನೋಡಲು ಸಹಾ ನಮಗೆ ವಿಶೇಷ ಗಾಜಿನ ಕನ್ನಡಕ ಸಿನೆಮಾದಲ್ಲಿ ಕೊಡುತ್ತಾರೆ... ಅದಕ್ಕೂ ಹೆಚ್ಚಿನದಾದರೆ!!!???

ಒಂದು ನಮೂನೆಯನ್ನು ವಿಜ್ಞಾನಿಗಳು ಹೀಗೆ ವರ್ಣಿಸುತ್ತಾರೆ. ನೋಡಲು ಇದನ್ನು ಕ್ಲಿಕ್ ಮಾಡಿ>
https://nl.wikipedia.org/wiki/Bestand:Tesseract2.gif

ಆ ಬಗ್ಗೆ - ಈ ಅನ್ಯಗ್ರಹ ಜೀವಿಗಳು ಅಲ್ಲಿದ್ದರೂ ನಮಗೆ ಕಾಣದಿರುವುದು ಏಕೆಂದರೆ ...ನೀವೇ ಓದಿ...



***All planets as well as living beings else, have 6 mainlevels of existence, and many/most of the UFOs comes from those higher levels, but can make "a dive" into lower worlds, and adjust their "material frequency" to fit into the level they will visit/watch over or make help to. (ill.by Rune Øverby, and not in the original .book)***

*ನಮ್ಮನ್ನು ಕಾಣಲೆಂದೇ ಅವು ಮೂರು ಆಯಾಮದ "ನಮ್ಮ ಮಣ್ಣಿನ ಕಣ್ಣಿಗೆ" ಹೊಂದಿಸಿಕೊಂಡು ಇಳಿದು ಬರುತ್ತವಂತೆ. ಅನಂತರ ಸರಾಗವಾಗಿ ಮೇಲಿನ ಆಯಾಮಕ್ಕೆ ಬದಲಿಸಿಕೊಂಡು ನಮ್ಮ ಕಣ್ಣಿಗೆ ಕಾಣದಂತೆ ಮಾಯವಾಗಿ ಹೋಗುತ್ತವೆ... ತುಂಬಾ ಸರಳ, ಕಾರಿನ ಗೇರು ಬದಲಿಸಿದಂತೆ ಅಲ್ಲವೆ...!! ☺*

ಇನ್ನೊಂದು ಮುಖ್ಯ ಗಗನ ಸಾರಿಗೆ ಮಾರ್ಗ ಅಥವಾ ವ್ಯವಸ್ಥೆಯೆಂದರೆ "ಸ್ಪೇಸ್ -ಟೈಮ್ ವಾರ್ಪ್" ಬಗೆಯದು

## *4.4 ಕಾಲಯಾನ ಮತ್ತು ಸ್ಪೇಸ್-ಟೈಮ್ ಸಿದ್ಧಾಂತ*

(**ನನ್ನ "ನಾಳೆಯನ್ನು ಗೆದ್ದವನು" ಕಾದಂಬರಿಯಲ್ಲಿ ಇದನ್ನು ವಿವರಿಸಿ ಬಳಸಿದ್ದೇನೆ, ನೀವೂ ಓದಿ ನೋಡಿ**)

ಅದನ್ನು ಹೀಗೆ ವಿವರಿಸಬಹುದು:



*ದೇಶ (ಸ್ಪೇಸ್) ಅಥವಾ ಆಕಾಶ ,ಮತ್ತು ಕಾಲ ಬೇರೆ ಬೇರೆಯಲ್ಲ. ಎರಡೂ ಒಂದಕ್ಕೊಂದು ಜಂಟಿ ಹಾಕಿಕೊಂಡಿವೆ.*

*ಒಂದೇ ಅಸ್ತಿತ್ವವೆಂಬ ಪರದೆಯ ಎರಡೂ ಮುಖಗಳು ಅಥವಾ ನೂಲುಗಳು ಎನ್ನಿ. ಪರಸ್ಪರ ಅವಿನಾಭಾವ ಸಂಬಂಧವಿದೆ. ಇದೋ ಚಿತ್ರ ಮೇಲಿದೆ - ಕಾಲ ಮತ್ತು ದೇಶದ ಬಟ್ಟೆಯ ಮೇಲೆ ಗುಡುಗುಡನೆ ಉರುಳುತ್ತಿದೆ ಭೂಮಿಯ ಪಯಣ!*

*ಅದಕ್ಕೆ ಈಗ ಬಾಹ್ಯಾಕಾಶ ವಿಜ್ಞಾನಿಗಳು ಸ್ಪೇಸ್ ಮತ್ತು ಟೈಮ್ ಎಂದು ಪ್ರತ್ಯೇಕವಾಗಿ ಎನ್ನದೇ ಸ್ಪೇಸ್- ಟೈಮ್ ಎನ್ನುತ್ತಾರೆ. ಅದನ್ನು ಒಟ್ಟಿಗೇ ಸ್ಪೇಸ್ ಟೈಮ್ ಕಂಟಿನ್ಯುಯಮ್ ( space-time continuum) ಎನ್ನುತ್ತಾರೆ*

**ವಿಜ್ಞಾನಿ ಆಲ್ಬರ್ಟ್ ಐನ್ಸ್ಟೀನ್ ರವರೇ ನಮಗೆ ಇತ್ತೀಚೆಗೆ ಸಾಪೇಕ್ಷತಾ ಸಿದ್ಧಾಂತದಲ್ಲಿ ತಿಳಿಸಿಕೊಟ್ಟಿದ್ದು ವಿಶ್ವ ವಿಜ್ಞಾನದ ತಳಹದಿ...ಈಗ ತಾನೆ ನಮ್ಮ ಬಾಹ್ಯಾಕಾಶ ವಿಜ್ಞಾನಿಗಳು ಸ್ಪೇಸ್-ಟೈಮ್ ಕಂಟಿನ್ಯುಯಮ್ ("ದೇಶ-ಕಾಲ ನಿರಂತರತೆ") ತತ್ವವನ್ನು ಪರೀಕ್ಷಿಸಹತ್ತಿದ್ದಾರೆ...ಅದೆಂದರೆ ಕಾಲವೆಂಬುದು ಸ್ಥಿರವಾದುದಲ್ಲ, ಎಲ್ಲರಿಗೂ ಒಂದೇ ಅಲ್ಲ...ಅದು ನಮಗೇ ಸುಲಭವಾಗಿ ಅರ್ಥವಾಗುತ್ತದೆ...ಈ ಭೂಮಿಯಲ್ಲೆ ಒಂದೆಡೆ ಅಂದಿನ ಹಗಲಾದರೆ, ಇನ್ನೊಂದೆಡೆ ಆಗ ರಾತ್ರಿ..ಇನ್ನು ಈ ವಿಶಾಲ ವಿಶ್ವದಲ್ಲಿ ಕಾಲಕ್ರಮದ ಪಾಡೇನು..ಅಲ್ಲವೆ? ...ಆಕಾಶ ಮತು ಕಾಲ ಎರಡೂ ಬೆರೆತ ಏಕತ್ವದಲ್ಲಿ ನಮ್ಮ ಭೂತ, ವರ್ತಮಾನ ಮತ್ತು ಭವಿಷ್ಯದ ಎಲ್ಲ ಘಟನೆಗಳೂ ಅಡಕವಾಗಿದೆ..ಅಂದರೆ ಭೂತ ಮತ್ತು ಭವಿಷ್ಯ ಇಂದಿನ ವರ್ತಮಾನ ಕಾಲದಂತೆಯೇ ಸತ್ಯ, ಎಲ್ಲವೂ ಸದಾ ಇದ್ದದ್ದೇ, ಇರುವುದೇ, ಯಾವುದೂ ಕಳೆದೂ ಹೋಗಿಯೂ ಇಲ್ಲ, ಯಾವುದೂ ಬರದಿರುವುದೂ ಇಲ್ಲ... ನಮ್ಮ ನಮ್ಮ ಕಾಲ ಮಿತಿಯಲ್ಲಿ ನಾವು ಆ ಕಿಟಕಿ ಕೊರೆದು ಈ ಲೋಕದಲ್ಲಿನ ಆಗುಹೋಗುಗಳನ್ನು ನೋಡುತ್ತಿರುತ್ತೇವೆ, ಆಗ 'ಬಾಳು'ತ್ತಿರುತ್ತೇವೆ... ಆದರೆ ವಿಶ್ವಕಾಲದ ಎಲ್ಲಾ ಘಟನೆಗಳೂ ಸದಾ ನಿರಂತರವಾಗಿ ಅಸ್ತಿತ್ವದಲ್ಲಿರುತ್ತದೆ, ಸಮಯ ಮಾತ್ರವೇ ಅದನ್ನು ಆಗಾಗ ನಮಗೆ ಆಯಾ ಕ್ಷಣಕ್ಕೆ ತಕ್ಕಂತೆ ತೋರಿಸುತ್ತಿರುತ್ತದೆ. ಈಗ ಕಾಣುವುದನ್ನು ವರ್ತಮಾನ ಎನ್ನುತ್ತೇವೆ. ಗತಿಸಿ ಹೋದರೆ 'ಕಾಲ'ವಾಯಿತು ಎನ್ನುತ್ತೇವೆ. ಅಂದರೆ ಕಾಲಗರ್ಭದಲ್ಲಿ ಅದು ಸದಾ ದಾಖಲಾಗಿ ಜೀವಂತವಾಗಿರುತ್ತದೆ, ನಮಗೆ ಎಲ್ಲವೂ ಒಟ್ಟಿಗೇ ಕಾಣಲಾಗದು ಅಷ್ಟೇ. ( ತ್ರಿಕಾಲ ಜ್ಞಾನ ತತ್ವ ಇಲ್ಲಿಗೆ ಬಂದು ನಿಲ್ಲುತ್ತದೆ)**

**ಸುಲಭವಾಗಿ ಅರ್ಥಮಾಡಿಕೊಳ್ಳಲು ಈ ಉದಾಹರಣೆ ನೋಡಿ:**

*ನೀವು ರೈಲಿನಲ್ಲಿ ಹೋಗುವಾಗ ಹಿಂದಿನ ಸ್ಟೇಷನ್ ಅನ್ನು ಕಾಲ ಚಕ್ರದಲ್ಲಿ ಸ್ವಲ್ಪ ಹಿಂದೆಬಿಟ್ಟು ಮುಂದೆ ಹೋಗಿರುವುದಿಲ್ಲವೆ ಹಾಗೆ!.. ಹಾಗೆಯೇ ಮುಂದಿನ ಸ್ಟೇಷನ್ ಇನ್ನೂ ಕಾಲಚಕ್ರದಲ್ಲಿ ಬಂದಿಲ್ಲ, ಆದರೆ ಅದು ಸಮಯದ ಪರಿಧಿಯಲ್ಲಿ ಮುಂದೆ ಇದ್ದೇ ಇರುತ್ತದೆ..ನಾವೇ ಅಲ್ಲಿಗೆ ತಲುಪಬೇಕು, ಕಾಣಬೇಕು ಅಷ್ಟೆ. ಆದರೆ ಈಗ ಕಾಣದ ಈ ಎರಡೂ ಸ್ಟೇಷನ್ನುಗಳೂ "ಇಲ್ಲವೇ ಇಲ್ಲ"*

*ಎನ್ನಲು ಸಾಧ್ಯವೇ ?? ಹಾಗೂ ನಮ್ಮ ರೈಲು ಮುಂದಿನ ಸ್ಟೇಷನ್ನಿಗೇ ಹೋಗದೇ ನಿಂತೇ ಇದ್ದರೆ ಎಲ್ಲಿರುತ್ತೇವೋ ಅದೇ ನಮ್ಮ ಹೊಸ ವರ್ತಮಾನವಾಗಿಬಿಡುತ್ತದೆ.. ಅಲ್ಲಿಗೆ ಲೇಟಾಗಿ ತಲುಪಿದರೆ ಕಾಲ ಬೇರೆಯಾಗಿಬಿಟ್ಟಿರುತ್ತದೆ, ಅದೇ ವರ್ತಮಾನವಾಗಿ ಅಲ್ಲಿಂದ ಮುಂದಿನ ಭವಿಷ್ಯ ಕಾಲ ಬದಲಾಗುತ್ತಾ ಹೋಗುತ್ತದೆ.*

**...ಅಂದರೆ ಇಲ್ಲಿ ಒಂದು ವಿಷಯ: ಭೂತವು ನಾವು ಮಾಡಿದ ಕರ್ಮಫಲವಾಗಿ ಇದ್ದ ಹಾಗೆಯೇ ಇರುತ್ತದೆ, ಬದಲಾಗುವುದಿಲ್ಲ...ಭವಿಷ್ಯ ಮಾತ್ರ ನಾವು ಇಂದು ಮಾಡುವ ಕರ್ಮಫಲದ ಪರಿಣಾಮವಾಗಿ ಹೊಸದಾಗಿ ನಿರ್ಮಾಣವಾಗುತ್ತಾ ಹೋಗುತ್ತಿರುತ್ತದೆ, ಸದಾ ಬದಲಾಗುತ್ತಾ ಹೋಗುತ್ತಿರುತ್ತದೆ**. ಅದಕ್ಕೆ 'ಇಂದು' ಮಾತ್ರ ನಮ್ಮ ಕೈಯಲ್ಲಿದೆ ಎನ್ನುವುದು ಅನುಭವಿಗಳು, ತಜ್ಞರು...ಅಂದಿನ ದಿನ ಬಂದಾಗ ಅದಿದ್ದ ಸ್ಥಿತಿಯನ್ನು ಕಂಡು ಇದೇ ನಮ್ಮ ವರ್ತಮಾನ ಸ್ಥಿತಿ ಎಂದುಕೊಳ್ಳುತ್ತೇವೆ ಅಷ್ಟೇ"




**<u>ಬೆಳಕಿನ ವೇಗವನ್ನು ಮೀರಿ ಅದಕ್ಕೂ ಮುಂಚೆ ಹೋಗಿಬಿಟ್ಟರೆ</u>**?

ಸ್ಪೇಸ್ ಟೈಮ್ ಪರದೆಯಲ್ಲಿ ಹಿಗ್ಗಲಿಸಿ ಅಥವಾ ತಳ್ಳಿ ಪ್ರಯಾಣ ಮಾಡುವುದು ಎಂದರೆ ಸ್ಪೇಸ್ ಟೈಮ್ ವಾರ್ಪ್ ಡ್ರೈವ್ ಎನ್ನುತ್ತಾರೆ. ಇಲ್ಲಿ ಬೆಳಕಿಗಿಂತಾ ಹೆಚ್ಚಿನ ವೇಗದಲ್ಲಿ ಹೋಗಲು "ಮುಂದಿನದನ್ನು ಕುಗ್ಗಿಸಿ, ಹಿಂದಿನದನ್ನು ಹಿಗ್ಗಲಿಸಿ" ಕಾಲಯಾನವನ್ನು ಮಾಡುವುದು ಎಂದರ್ಥ. ನಿಜಕ್ಕೂ ಬೇಕಾದ ಅವಧಿಯನ್ನು ಕುಗ್ಗಿಸಿ ಸಮಯವನ್ನೇ ಶಾರ್ಟ್ ಕಟ್ ಮಾಡುವುದು... ಅಂದರೆ ಹೀಗೆ:-




**ಈ ವ್ಯವಸ್ಥೆಯನ್ನು ಕರತಲಾಮಲಕ ಮಾಡಿಕೊಂಡಿರುವ ಅನ್ಯಗ್ರಹ ಜೀವಿಗಳು ಜ್ಯೋತಿವರ್ಷಗಳನ್ನೂ ಶೀಘ್ರವಾಗಿ ದಾಟಿ ಅನಾಯಾಸವಾಗಿ ತಮ್ಮ ಜೀವನಕಾಲದಲ್ಲೇ ಅನ್ಯ ಸೌರವ್ಯೂಹಗಳಿಗೆ ತಲುಪಿಬಿಡುತ್ತಾರೆ, ವಾಪಸ್ ಕೂಡಾ ಹೋಗಿಬಿಡುತ್ತಾರೆ. ನಾವು ಭೂಮಿಯಲ್ಲಿ ಈ ನಿಟ್ಟಿನಲ್ಲಿ ಪ್ರಗತಿಹೊಂದಲು ಇನ್ನೆಷ್ಟು ಸಹ ಸಹಸ್ರ ವರುಷ ಕಾಯಬೇಕೋ...(*ಅಥವಾ ಅವರ ಜತೆ ಒಪ್ಪಂದ ಮಾಡಿಕೊಂಡು ಇದನ್ನೆಲ್ಲಾ ಬೇಗ ಪಡೆದುಕೊಂಡರೆ?... ಆದರೆ ನಮ್ಮಲ್ಲಿ ಅದಕ್ಕೆ ತಕ್ಕ ಘನತೆ, ಅರ್ಹತೆ, ಮಾನಸಿಕ ಪ್ರೌಢತೆ ಇದೆಯೆ ಎಂದು ಅವರು ನಿರ್ಧರಿಸಬೇಕು, ಇದನ್ನು ಮುಂದೊಮ್ಮೆ ಹೇಳುತ್ತೇನೆ)***

*ಇದೇ ವೈಜ್ಞಾನಿಕ ಸಿದ್ಧಾಂತದ ಇನ್ನೊಂದು ಮಜಲು ಎಂದರೆ:*

## *4.5 ವರ್ಮ್ ಹೋಲ್ ಪ್ರಯಾಣ ('ಹುಳುಹಾದಿ 'ಯೆಂಬ ಅದ್ಭುತ ದಾರಿ):*

*ಇದರ ಉದಾಹರಣೆಗಾಗಿ ಸರಳ ಕತೆ ಇಲ್ಲಿದೆ:*

*ಮೇಜಿನ ಮೇಲೆ ಒಂದು ಸೇಬಿನ ಹಣ್ಣಿದೆ ಎಂದಿಟ್ಟುಕೊಳ್ಳೋಣ. ಅಲ್ಲೊಂದು ಹುಳ ಅದರ ಎಡ ಭಾಗದಿಂದ ಬಲಕ್ಕೆ ಹಾದು ಹೋಗಬೇಕು ಎಂದರೆ ಏನು ಮಾಡುತ್ತದೆ? ಹಣ್ಣಿನ ಮೇಲ್ಮೈ ಹತ್ತಿ ಇಳಿದು ಮಾಡಿ ಸುಸ್ತಾಗುತ್ತದೆಯೇ ಇಲ್ಲವೇ ಸೀದಾ 'ಟನೆಲ್' ಕೊರೆದು ಒಳಗೆ ನುಗ್ಗಿ ಬಿಡುತ್ತದೆಯೆ? ಆ ಶಾರ್ಟ್ ಕಟ್ ನೇರ ಸುರಂಗವೇ ವರ್ಮ್ ಹೋಲ್ ಅಥವಾ ಹುಳು ಕೊರೆದ*




*ಹಾದಿ... ಹುಳುಹಾದಿ.*

*( ಬೆಂಗಳೂರಿನಲ್ಲಿ ಮೈನ್ ರೋಡಲ್ಲಿ ಟ್ರಾಫಿಕ್ ಜಾಮ್ ಇದ್ದಾಗ, ಆಟೋದವನು/ ಬೈಕಿನವರು ಶಾಟ್ ಕಟ್ ಎಂದು 'ಹೊಸ ದಾರಿ' ಹುಡುಕುವುದಿಲ್ಲವೆ, ಹಾಗೆ!)*

***ಮುಂದಿನ ಚಿತ್ರವನ್ನು ಗಮನಿಸಿ...***

***ಇಲ್ಲಿ ಆ ಸೇಬಿನ ಹಣ್ಣಿನ ಬದಲಾಗಿ ನಮ್ಮ ಸ್ಪೇಸ್ ಟೈಮ್ ಪರದೆಯನ್ನು ಇಟ್ಟುಕೊಳ್ಳಿ.***
***ವಿಶ್ವದ ಒಂದು ಬದಿಯಲ್ಲಿ ಯಾವುದೋ A ದೇಶವು B ಎಂಬ ಯುಗ/ಕಾಲಮಾನದಲ್ಲಿದೆ ಅನ್ನಿ, ಇನ್ನೊಂದು ಬದಿಯಲ್ಲಿ C ಲೋಕದಲ್ಲಿ D ಎಂಬ ಯುಗ/ ಸಮಯ ನಡೆಯುತ್ತಿದೆ ಅನ್ನೋಣ ( ನಮ್ಮ ಭೂಗೋಳದ ಭಾರತದ ಮುಖದಿಂದ ಅಮೆರಿಕದ ಇನ್ನೊಂದು ಮುಖಕ್ಕೆ ಹಾರಿದರೇ 12 ಗಂಟೆ ವ್ಯತ್ಯಾಸ ಬರುವಾಗ ಇನ್ನು ವಿಶ್ವದಲ್ಲಿ ? ಈ ಅಗಾಧ ಬ್ರಹ್ಮಾಂಡದಲ್ಲಿ? ಸಾಧ್ಯವಿದೆ!)***
***ಈಗ ಇಲ್ಲೊಂದು ಹಾದಿ A ಇಂದ C ವರೆಗೂ ನೇರವಾಗಿ ಕೊರೆದರೆ ಅದರ ಮೂಲಕ ತೂರಿ ಹೋದರೆ ಯಾವುದೋ ಲೋಕದ ಯಾವುದೋ ಕಾಲದಿಂದ - ಇನ್ಯಾವುದೋ ಹೊಸಲೋಕದ ಹೊಸ ಕಾಲಮಾನಕ್ಕೆ ತಲುಪಿಬಿಟ್ಟಿರುತ್ತೇವೆ, ಅಲ್ಲವೆ?....***

***ಅಂದರೆ ಹುಳುಹಾದಿಯಲ್ಲಿ ಅಂತರಿಕ್ಷ ಯಾನ ಮಾಡಿದಾಗ ನಮಗೆ ಕಾಲ ಮತ್ತು ದೇಶ ಎರಡೂ ಒಟ್ಟಿಗೇ ಬದಲಾಗಿಬಿಟ್ಟಿತು ಎಂದರ್ಥವಾಗುತ್ತಿದೆ... ಇದೇ ಸ್ಪೇಸ್ ಟೈಮ್ ಕಂಟಿನ್ಯುಯಮ್ ರಹಸ್ಯ...***




*ಅಂದರೆ ಸಹಸ್ರಾರು ಜ್ಯೋತಿವರ್ಷದಷ್ಟು ಕಾಲಮಾನದಲ್ಲಿ ಮುಂದುವರೆದವರು, ಈ ರೀತಿ ಅಂತರಿಕ್ಷದ ಸ್ಪೇಸ್ ಟೈಮ್ ಪರದೆಯ ಮೇಲೆ ಹುಳುಹಾದಿ ಕೊರೆದು ಇನ್ನೊಂದು ಬದಿಗೇ ಹೋಗಿ ಬಿಟ್ಟರೆ, ಅಲ್ಲಿ ಯಾವುದೋ ಅನ್ಯ ಸೌರವ್ಯೂಹದಲ್ಲಿ ಯಾವುದೋ ಬೇರೆ ಜೀವಿಗಳಿಗೆ, ಯಾವುದೋ ಯುಗವೇ ನಡೆಯುತ್ತಿರಬಹುದು...ಯಾರಿಗ್ಗೊತ್ತು?*
*ನಿಲ್ಲಿ ನಿಲ್ಲಿ...ಗೊತ್ತಿದ್ದುಕೊಂಡು ಅಲ್ಲಿಗೇ ಹೋಗಬೇಕೆಂದು ಹೋಗಿದ್ದರೆ?*

*ಅಂದರೆ ಅವರ ಬಳಿ ಇಡೀ ವಿಶ್ವದ ಮ್ಯಾಪ್ ಇದೆಯೆಂದು ಊಹಿಸಿಕೊಳ್ಳಿ... ಹಿಂದೆಂದೋ ಅವರೇ ಬಂದು ಹೋದರೋ ಅಥವಾ ಅವರ ಗಗನನೌಕೆಗಳು ಸ್ಪೇಸ್ ಟೈಮ್-ವಾರ್ಪ್ ಪ್ರಯಾಣ ಮಾಡಿ ಅವರಿಗೆ ಎಲ್ಲಾ ಮಾಹಿತಿ ಕೊಟ್ಟಿದ್ದರಿಂದ ನಮ್ಮ ಭೂಮಿಯ ಕೋ-ಆರ್ಡಿನೇಟ್ಸ್ ಅಥವಾ ಬಾಹ್ಯಾಕಾಶ ವಿಳಾಸ ಗೊತ್ತಿದೆಯೆನ್ನಿ!*

*ಇರಲಿ, ಇನ್ನು ಹುಳುಹಾದಿ ಎಲ್ಲಿ ಸಿಗುತ್ತದೆ ಅವರಿಗೆ?..*
*ಅದಾಗಿಯೇ ಸಹಜವಾಗಿಯೂ ಆಗಬಹುದು ಅಥವಾ ಕೃತಕವಾಗಿ ಅತ್ಯಂತ ಮುಂದುವರೆದ ಜೀವಿಗಳು ಅವನ್ನು ಉಂಟು ಮಾಡಬಹುದು...*
*ಸಹಜವಾಗಿ ಇದು ಸಾಧ್ಯ, 1935 ರಲ್ಲೇ ವಿಜ್ಞಾನಿ ಐನ್ಸ್ಟೀನ್ – ರೋಸೆನ್ ರ ಥಿಯರಿ ಆಫ್ ಜನರಲ್ ರಿಲೇಟಿವಿಟಿ ಪ್ರಕಾರ ಎರಡು ಕಪ್ಪು ಕುಳಿಗಳು ಬ್ಯಾಕ್- ಟು-ಬ್ಯಾಕ್ ಸಿಕ್ಕಿ ತಗುಲಿಕೊಂಡಾಗ ಕಂಠದಲ್ಲಿ ಸಂಧಿಸಿ ಅಲ್ಲಿ ಹುಳುಹಾದಿ ತಾನೇ ನಿರ್ಮಾಣವಾಗಬಹುದು. ಅದನ್ನು ಬ್ರಿಡ್ಜಸ್ ಎಂದು ಅವರು ಆಗ ಹೆಸರಿಸಿದ್ದರು.*
https://www.space.com/20881-wormholes.html
*ಆಗ ಅದು ವಿಶ್ವದ ಎರಡು ವಿಭಿನ್ನ ಸ್ಥಳ ಮತ್ತು ಕಾಲದ ಪಾಯಿಂಟುಗಳನ್ನು ಸೇರಿಸುವ ಸುರಂಗವಾಗುತ್ತದೆ ಎಂದರು.*



*ದೊಡ್ಡ ತಾರೆಗಳ ಸ್ಫೋಟದಿಂದ ಉಂಟಾದ ನೆಗೆಟಿವ್ ಎನರ್ಜಿಯಿಂದ ಕಪ್ಪು ಕುಳಿ ಮತ್ತು ಹುಳುಹಾದಿ ಸಾಧ್ಯವಿದೆ, ಅನ್ಯಗ್ರಹ ಜೀವಿಗಳಿಗೆ!*

*ಹೆಚ್ಚಿನ ವೈಜ್ಞಾನಿಕ ಮಾಹಿತಿಗಾಗಿ ಸದ್ಯಕ್ಕೆ ಈ ಸೈಟನ್ನು ನೋಡಿ:*
https://phys.org/news/2013-12-creation-entanglement-simultaneously-wormhole.html
https://www.quora.com/How-does-a-wormhole-get-created

*ಆದ್ದರಿಂದ ಈ ಅಧ್ಯಾಯದ ನಮ್ಮ ಓದಿನಿಂದ ಇಷ್ಟು ತಿಳಿದು ಬಂದಿದೆ:*

1. ***ವಿವಿಧ ಬಗೆಯ, ಆಕಾರದ ದೊಡ್ಡ ಚಿಕ್ಕ ಗಗನನೌಕೆಗಳಿವೆ. ಸಂಶಯವೇ ಇಲ್ಲ, ಇಂತಾ ಟೆಕ್ನಾಲಜಿ ಮಾನವನ ಬಳಿ ಇಂದಿಗೂ ಇಲ್ಲ. ಅದಕ್ಕೇ ಅವು ನಮಗೆ ಪವಾಡ ಸದೃಶವಾಗಿ ಕಾಣುತ್ತಿವೆ***
2. ***ಬಾಹ್ಯಾಕಾಶದಲ್ಲಿ ವರ್ಮ್ ಹೋಲ್ ಗಳಿವೆ. ಅವು ಸಾಧ್ಯ. ಹಲವಾರು ಇಂತಾ ಅಂತರಿಕ್ಷದ ಸುರಂಗ ಮಾರ್ಗಗಳಲ್ಲಿ ಅನ್ಯಗ್ರಹ ನೌಕೆಗಳು ಸಲೀಸಾಗಿ ಪಯಣಿಸುತ್ತಾ "ಲೋಕಸಂಚಾರಿ" ಯಾಗಿವೆ, ಅದಕ್ಕೆ ತಗಲುವ ರಿಯಲ್ ಟೈಮ್ ಗಿಂತಾ ಮುಂಚೆಯೇ ಅನೂಹ್ಯವಾದ ದೂರದ ಅಂತರಿಕ್ಷಕ್ಕೆ ತಲುಪಬಲ್ಲವಾಗಿವೆ***

*(ಈ ಥಿಯರಿಯನ್ನು ಬಳಸಿಕೊಂಡು ಬರೆದ ಕನ್ನಡ ಕಾದಂಬರಿ- **ನಾಳೆಯನ್ನು ಗೆದ್ದವನು** ನನ್ನದು, ಓದಿ ನೋಡಿ)*

| |
|---|
| ***ಮುಂದೆ...*** |
| *ಹಲವು ಆಯಾಮಗಳ ಲೋಕಗಳಿವೆಯೆ?* |
| *ಅವರು ಅದೃಶ್ಯ ರೂಪದಲ್ಲಿರುವುದರಿಂದ ನಮಗೆ ಕಾಣುವುದಿಲ್ಲವೆ?* |
| *ಯಾವ್ಯಾಹ ಗ್ರಹಮಂಡಲ, ಗೆಲಾಕ್ಸಿಗಳಿವೆ?* |

*ಎಂತೆಂತಾ ಪೀಳಿಗೆಯ ಅನ್ಯಗ್ರಹ ಜೀವಿಗಳು ಬರುತ್ತಿವೆ? ಅವುಗಳ ಹೆಸರು ಕುಲ ವಿವರಗಳೇನೇನು?*

# 7ನೇ ಕಂತು:

# © ನಾಗೇಶ್ ಕುಮಾರ್ ಸಿಎಸ್

## ಅಧ್ಯಾಯ 5. ಹಲವು ಆಯಾಮಗಳೂ, ಅಲ್ಲಿನ 'ಆಸಾಮಿ'ಗಳೂ...

### 5.1 ಮೂರೂ ಮತ್ತೊಂದು...?



*ಈ ಆಯಾಮಗಳು ಯಾವುವು?*

https://phys.org/news/2014-12-universe-dimensions.html

*ಈ ಮಾದರಿಯಲ್ಲಿ ಮೂರಕ್ಕಿಂತ ಹೆಚ್ಚಿನ ಆಯಾಮವನ್ನು ಬಣ್ಣಿಸಲಾಗಿದೆ.*

The existence of extra dimensions is explained using the Calabi-Yau manifold, in which all the intrinsic properties of elementary particles are hidden. Credit: A Hanson

*ನಮಗೆ ತಿಳಿದ ಗಣಿತ ಮತ್ತು ಕಣ್ಣಿಗೆ ಕಾಣುವ ವಸ್ತುವಿನ ಪ್ರಾಪರ್ಟೀಸ್- ಗುಣವಿಶೇಷಗಳ ಲೆಕ್ಕದಲ್ಲಿ- ಮೂರು ಆಯಾಮಗಳಿವೆ. **ಉದ್ದ, ಅಗಲ ಮತ್ತು ಆಳ.***

*ಸಮಯ( Time) ವನ್ನು ಕೆಲವರು ನಾಲ್ಕನೇ ಆಯಾಮವೆನ್ನುತ್ತಾರೆ.*

*ಭೌತಿಕವಾಗಿಯೇ ಮೂರಕ್ಕಿಂತಾ ಹೆಚ್ಚಿರುವ ವಸ್ತುಗಳಿದ್ದರೆ ನಾವು ನೋಡುವ ಬಗೆಯೇನು? **ನಮ್ಮ ಕಣ್ಣಿಗೆ ಐದು , ಆರು ಅಯಾಮಗಳಿದ್ದರೆ ಅವು `ಅದೃಶ್ಯ' ವಾಗುವುವು. ಅಲ್ಲವೆ?...ಮೂರು ಅಂದರೆ ದೃಶ್ಯ, ಹೆಚ್ಚಾದರೆ ಅದೃಶ್ಯ!***

*ಮೊದಲೇ ಹೇಳಿದಂತೆ ಮೂರನೆಯ ಆಯಾಮವನ್ನೇ ಸರಿಯಾಗಿ ಅನುಭವಿಸಲು ಸ್ಪೆಷಲ್ ಕನ್ನಡಕ ಕೊಡುತ್ತಾರಲ್ಲವೇ 3-ಡಿ ಸಿನೆಮಾಗಳಲ್ಲಿ?...*
*ಹಾಗಾಗಿ: ಅಕಸ್ಮಾತ್ ಮೂರು ಆಯಾಮಗಳಿಂದ - ಇಂಗ್ಲೀಷಿನಲ್ಲಿ **L, B and D**- ಯಾವುದೇ ವಸ್ತು ಐದನೇ ಇಲ್ಲವೇ ಆರನೇ ಆಯಾಮಕ್ಕೆ ತಿರುಗಿತೆಂದರೆ ಅದು "ಮಾಯವಾಯಿತು" ಎನ್ನುತ್ತೇವೆ... (ಪ್ರಾಯಶಃ ಇದನ್ನೇ ಮ್ಯಾಜಿಕ್, ಪವಾಡ ಎನ್ನಬಹುದೇನೋ!...ನನಗೆ ಖಚಿತವಾಗಿ ಗೊತ್ತಿಲ್ಲ)*

*ಒಟ್ಟಿನಲ್ಲಿ ಅನ್ಯಗ್ರಹ ಜೀವಿಗಳಂತೂ- ನಂಬಲರ್ಹ ಮೂಲಗಳ ದಾಖಲೆಯಲ್ಲಿ, ಪುಸ್ತಕಗಳಲ್ಲಿ ತಾವು ಅಪಹರಣ ಮಾಡಿದವರಿಗೆ –' **ನಾವು ಹೆಚ್ಚಿನ ಆಯಾಮಗಳಿಗೆ ಜೀವರಾಶಿಯನ್ನು ವಿಸ್ತರಿಸಿಕೊಂಡು ಹೋಗುವ ಶಕ್ತಿಯುಳ್ಳವರೆಂದೂ, ಅಲ್ಲದೇ ತಮ್ಮ ಆಕಾರ (shape) ವನ್ನೇ ಸ್ವೇಚ್ಛೆಯಿಂದ ಬದಲಿಸಬಲ್ಲವೆಂದೂ** ' ಹೇಳಿಕೊಂಡಿವೆ. ಅಂದರೆ ತಮ್ಮ ಅಸಲೀ ರೂಪ ನಮ್ಮ ಕಣ್ಣಿಗೆ ಬೀಳದಿದ್ದರೆ ( ಮೂರಕ್ಕಿಂತಾ ಹೆಚ್ಚಿನ ಆಯಾಮ) ಅಥವಾ ನಮಗೆ ವಿಕಾರವಾಗಿ ತೋರುವುದೆಂದು ಅವರಿಗೇ ಅನಿಸಿದರೆ, ನಮಗೆ ಒಪ್ಪುವಂತಾ, ಸಹಜವಾಗಿ ಕಾಣುವಂತಾ ಮಾನವ ರೂಪಿ ಶರೀರ ಧಾರಣೆಯನ್ನೂ ಮಾಡಬಲ್ಲರಂತೆ... ಇದೆಲ್ಲಾ ವಿಕಾಸದ ಹಾದಿಯಲ್ಲಿ ಅವರು ಮ್ಯುಟೇಶನ್ ಆಗುತ್ತಾ ಪಡೆಯುತ್ತಾ ಹೋದ ವಿಶೇಷ ಶಕ್ತಿಗಳು, ಗುಣಗಳು ಇತ್ಯಾದಿ...*

***ಇಲ್ಲಿ ಕೆಳಕಂಡ ವರದಿ ಪ್ರಕಾರ ಅಮೆರಿಕಾದ ಸರಕಾರಿ ಸಂಸ್ಥೆ FBI ಸಹಾ ಇದನ್ನು ಒಪ್ಪಿಕೊಂಡಿದೆಯಂತೆ!***
***ನೋಡಿ ಸಾಕ್ಷಿ ಸಮೇತ ದಾಖಲೆ...ಮತ್ತೆ 'ಇದನ್ನು ನಂಬಬಹುದೇ?' ಅನ್ನಬೇಡಿ!***
*http://www.ufointernationalproject.com/sighting-reports/beings-are-visiting-us-from-other-dimensions-confirms-the-fbi/*

U. S. DEPARTMENT OF JUSTICE
COMMUNICATIONS SECTION

AUG 4 1947

TELETYPE

WASHINGTON 1 FROM NEWARK 8-4-47 5-36 PM EDST JFG

DIRECTOR URGENT

FLYING DISC REPORTED AT HACKENSACK, NJ AUGUST THREE, NINETEEN FORTY [redacted]
SEVEN , MISC. INFORMATION RECEIVED THAT [redacted] AGE [redacted]
[redacted] AGE TWENTY, [redacted] HACKENSACK AND [redacted]
FT. DIX, NJ ON LATE AFTERNOON AUGUST THIRD LAST SIGHTED
FROM GROUND OBJECT DESCRIBED AS FLYING DISC. [redacted] CLAIMED IT WAS
TWO HUNDRED [redacted] YDS, IN AIR, REVOLVING SLOWLY, MOVING RAPIDLY, AND
NEITHER A KITE NOR A BALLOON. [redacted] TELEPHONED INFORMATION TO HACK-
ENSACK PD. INQUIRY BEING MADE. BUREAU WILL BE KEPT ADVISED.

MC KEE

END

NK R 1 WA

RECORDED

EX-46

***ಹೇಗೆ ಅಳಿಸಿ , ತಿದ್ದಿ ಜನರಿಗೆ ಬಿಡುಗಡೆ ಮಾಡಿದ್ದಾರೆ ಮೇಲೆ ...ನೋಡಿ!***



[redacted]

San Diego 4. Calif.

6751

THE ROUND ROBIN

THE FLYING ROLL

San Diego, California July 8, 1947 -

b7 [redacted]

(For your Information) - A MEMORANDUM OF IMPORTANCE -

THIS MEMORANDUM is respectfully addressed to certain scientists of distinction to important aeronautical and military authorities, to a number of public officials and to a few publications.

The writer has little expectation that anything of import will be accomplished by this gesture. The mere fact that the data herein were obtained by so-called supernormal means is probably sufficient to insure its disregard by nearly all the persons addressed; nevertheless it seems a public duty to make it available. (The present writer has several university degrees and was formerly a university department head).

A very serious situation may develop at any time with regard to the "flying saucers." If one of these should be attacked, the attacking plane will almost certainly be destroyed. In the public mind this might create near panic and international suspicion. The principal data concerning these craft is now at hand and must be offered, no matter how fantastic and unintelligible it may seem to minds not previously instructed in thinking of this type.

1. Part of the disks carry crews, others are under remote control.
2. Their mission is peaceful. The visitors contemplate settling on this plane
3. These visitors are human-like but much larger in size.
4. They are NOT excarnate earth people, but come from their own world.
5. They do NOT come from any "planet" as we use the word, but from an etheric planet which interpenetrates with our own and is not perceptible to us.
6. The bodies of the visitors, and the craft also, automatically "materialize" on entering the vibratory rate of our dense matter. (Cp. "apports.")
7. The disks possess a type of radiant energy, or a ray, which will easily disintegrate any attacking ship. They reenter the etheric at will, and so simply disappear from our vision, without trace.
8. The region from which they come is NOT the "astral plane", but corresponds to the Lokas or Talas. Students of esoteric matters will understand these terms.
9. They probably cannot be reached by radio, but probably can be by radar, if a signal system can be devised for that apparatus.

INDEXED

We give information and warning, and can do no more. Let the newcomers be treated with every kindness. Unless the disks are withdrawn, a situation threatens with which our culture and science are incapable of dealing. A heavy responsibility rests upon the few in authority who are able to understand ~~this matter~~.

[redacted] b7c

[redacted] b7c

San Diego, California.

Addendum: The Lokas are oval shape, fluted length oval with a heat-resisting metal or alloy not yet known the front edge contains the controls; the middle portion laboratory; the rear contains armament, which consists essentially of a powerful energy apparatus, perhaps a ray apparatus.

***ಈ ಲೋಕಗಳು, ಅತಳ, ವಿತಳ , ಪಾತಾಳಗಳು ಖಂಡಿತಾ ಅಮೆರಿಕನ್ ಸೈನ್ಯದವರಿಗೆ ಗೊತ್ತಿರಲಿಕ್ಕಿಲ್ಲ, ಬಾಕ್ಸ್ ಓದಿ; 8 ನೇ ಪಾಯಿಂಟ್ ನೋಡಿ... ನಮ್ಮ ಭೂಗ್ರಹ ಕ್ಕೆ ಅಂಟಿಕೊಂಡಂತೆ ಬೇರೆ ಆಯಾಮದಲ್ಲಿ ಬೇರೆ ಲೋಕಗಳಿವೆ ಎನ್ನುತ್ತದೆ ಈ ಸರಕಾರೀ ವರದಿ... ಇದಂತೂ ಅಮೆರಿಕನ್ ಪಬ್ಲಿಕ್ ಡೊಮೈನ್ ದಾಖಲೆ, ಸುಳ್ಳಲ್ಲ. ಯಾರಾದರೂ ಚೆಕ್ ಮಾಡಬಹುದು.***



*ಇವೆಲ್ಲಾ ಆಫಿಶಿಯಲ್ ಸೀಕ್ರೆಟ್ಸ್ ಎಂಬ ಮುಸುಕಿನಡಿಯಲ್ಲಿ ಇದ್ದರೂ, ಹೀಗೆಲ್ಲಾ ಮಾಹಿತಿಗಳು ಬಹಳ ಮೂಲಗಳಿಂದ ಹೊರಕ್ಕೆ "ಸೋರಿಕೆ" ಯಾಗಿದೆ:*

***Giant 'translucent figures' are visiting Planet Earth – according To FBI***

*( ಆಜಾನುಬಾಹು ಅರೆ-ಪಾರದರ್ಶಕ ಜೀವಿಗಳು ಇಲ್ಲಿಗೆ ಬಂದು ಹೋಗುತ್ತಿವೆ .)*

*( ಮೂಲ:* **http://www.ufointernationalproject.com/sighting-reports/beings-are-visiting-us-from-other-dimensions-confirms-the-fbi/** *)*

***ಇದರಲ್ಲಿ FBI website  ಮಾಹಿತಿ ಕೂಡಾ ಇದೆಯಂತೆ....ನೀವೇ ಓದಿ ನೋಡಿ.***

*ಮಲ್ಟಿವರ್ಸ್ ಅಂದರೆ ಒಂತರಾ ಮಲ್ಟಿಪ್ಲೆಕ್ಸ್ ಸಿನೆಮಾದಂತೆ. ಒಂದೇ ಸೂರಿನಡಿ ಹಲವು ಚಿತ್ರಗಳು ಹಲವು ಸ್ಥಳ–ಪರದೆಯಲ್ಲಿ ಪ್ರದರ್ಶನವಾಗುತ್ತಲೇ ಇರುತ್ತಲ್ಲಾ?....ಹಾಗೇ ಹಲವು ವಿಶ್ವಗಳು ಇರುವ ಏಕೈಕ ಬೃಹತ್ ಬ್ರಹ್ಮಾಂಡವನ್ನು ಈಗೀಗ ವಿಜ್ಞಾನಿಗಳೇ ಒಪ್ಪುತ್ತಿದ್ದಾರೆ!*

## ***Multiple Universes or Multiverse!***



***http://www.sci-news.com/astronomy/multiverse-life-06005.html***

## ***ಅನ್ಯಗ್ರಹ ಜೀವಿಗಳ ಚಿತ್ರಪಟಗಳು:***

***ಇವರು ನೋಡಲು ಹೇಗಿರುತ್ತಾರೆ ಎಂಬುದರ ಬಗ್ಗೆ ಒಂದು ಜಾಲತಾಣದಲ್ಲಿ ಹೀಗೆ ವರ್ಣಿಸಿದ್ದಾರೆ:***

Some Extraterrestrials looks just like humans….others look very different…






The galaxy closest to ours is called ***Andromeda***






The Sirians helped bring crystal technology to Atlantis thousands of years ago.









*ಇಲ್ಲಿ ನೋಡಿ ಎರಡನೇ ಚಿತ್ರ- ಧ್ಯಾನ, ತಂತ್ರ, ಕುಂಡಲಿನಿ ಮತ್ತೆ ಕಾಣಿಸಿಕೊಂಡಿತು.*

*ಊಹೂಂ! ನಮಗೆ ಹಿತ್ತಲ ಗಿಡ ಮದ್ದಲ್ಲವಲ್ಲ!..ಅವರು ಅದೇ ರೀತಿಯಲ್ಲೇ ಅತಿಮಾನವ ಶಕ್ತಿಗಳನ್ನು ಸಂಪಾದಿಸಿದರು ಎಂದರೆ ನಂಬಲ್ಲ?...ಇಲ್ಲಿ ನಾವು ಯೋಗಾ, ಪ್ರಾಣಾಯಾಮವನ್ನೇ ಹಾಸ್ಯ ಮಾಡುತ್ತೇವಲ್ಲ!...ಹೋಗಲಿ ಬಿಡಿ...ನಂಬಿದವರಿಗುಂಟು, ಇಲ್ಲದವರಿಗಿಲ್ಲ!*



*<< ಇದು ಹಳೇ ಕಾಲದ ಕಪ್ಪು ಬಿಳುಪು ಜಮಾನದ ಚಿತ್ರ.. ಫೋಟೋಶಾಪ್ ಇರಲಿಲ್ಲ... ಇದನ್ನಾದರೂ ನಂಬೋಣವೆ?...*
*<< ಹೀಗೂ ನಮ್ಮವರನ್ನು ಅವರು ಭೇಟಿಯಾಗೇ ಇದ್ದರು ಎಂದು?. ಅಥವಾ ಯಾವುದೋ ಸರ್ಕಸ್ಸಿನ ಕುಳ್ಳ ಬಫೂನ್ ಇರಬೇಕು ಎನ್ನುತ್ತೀರೋ ಇದನ್ನು?☺*




***ಈ ಅನ್ಯಗ್ರಹದ ಆಸಾಮಿಯನ್ನು 'ವಿಚಾರಣೆ' ಮಾಡಿದರಂತೆ ಸರಕಾರೀ ರಕ್ಷಣಾ ಅಧಿಕಾರಿಗಳು. ಅದರ ವಿಡಿಯೋ ತುಣುಕು ಯಾರೋ ಲೀಕ್ ಮಾಡಿದ್ದಾರೆ ಯೂಟ್ಯೂಬಿನಲ್ಲಿ!***



*<< ಈ ಬಗೆಯ ಅಪಘಾತವಾದ ನೌಕೆಗಳಲ್ಲಿ ದೇಹಾವಶೇಷಗಳು ಸಿಕ್ಕು ಅವರ ಜೈವಿಕ ಲೈವ್ ಮಾಹಿತಿ ಆಯಾ ಸರಕಾರಕ್ಕಿದೆಯೆನ್ನುತ್ತಾರೆ. ಆಕಾರ, ರೂಪುರೇಷೆ, ಅಂಗಾಂಗ ವಿನ್ಯಾಸ ಎಲ್ಲಾ!*

***ಅನ್ಯಗ್ರಹ ಜೀವಿಗಳ ದೇಹದ ವೈಬ್ರೇಷನ್ಸ್/ಮಿಡಿತ ತರಂಗಗಳು ಬಹಳ ಹೆಚ್ಚಿನದಾಗಿದ್ದು ನಮ್ಮ ಕ್ಯಾಮೆರಾಗಳು ಅವನ್ನು ಹಿಡಿಯಲು ಸಾಧ್ಯವಾಗದೇ ಶೇಕ್ ಆದಂತೆ ಕಾಣಿಸುತ್ತಂತೆ. ಮೊದಲೆರಡು ಅಧ್ಯಾಯಗಳಲ್ಲಿ ಪೈಲೆಟ್ಟುಗಳೂ, ಪೋಲೀಸರು "ಅವು ಕ್ಷಣಕ್ಕೊಮ್ಮೆ ಮಾಯವಾಗಿ ಇನ್ನೆಲ್ಲೋ ಕಾಣುತ್ತಿದ್ದವು, ಮಿನುಗುತ್ತಿದ್ದವು" ಎನ್ನಲಿಲ್ಲವೆ?... ಹಾಗೂ ಫೋಟೋ ಹಿಡಿಯಲು ಹೋದರೆ ಇಲ್ಲಿ ಕೆಳಕಂಡಂತೆ ಕಾಣುತ್ತಂತೆ..ಅದಕ್ಕಾಗಿಯೇ ಅವು ನಾವು ಕಾಣುವ ತರಂಗಾಂತರ, ಮೂರು ಆಯಾಮದ ಜಗತ್ತಿಗೆ ಇಳಿದು ಬರುವುದು.! ನಮಗೆ ಸರಿಯಾಗಿ ಕಾಣಿಸಲೆಂದು...***




*ಇನ್ನು ಹೆಚ್ಚಿನ ಮಾಹಿತಿಗಾಗಿ ಈ ಯೂ -ಟ್ಯೂಬ್ ವಿಡಿಯೋ ನೋಡಿ:*

***ಕೆನಡಾ ದೇಶದ ಮಾಜಿ ರಕ್ಷಣಾ ಮಂತ್ರಿ ಏನು ಹೇಳುತ್ತಾರೆ ಕೇಳಿ. ಅವರು ಅಧಿಕಾರದಲ್ಲಿದ್ದಾಗ ಹೇಳಲು "ಬಿಡಲಿಲ್ಲ"***




https://www.youtube.com/watch?v=TeHwKrMomGI

## *5.2 ಅನ್ಯಗ್ರಹ ಜೀವಿಗಳು " ಕಾಣುವುದಿಲ್ಲ" ಎಂದರೇನು?*

*ಈಗಾಗಲೇ ಚರ್ಚಿಸಿದ್ದೇವೆ... ಅವು ಹೆಚ್ಚಿನ ಆಯಾಮದಲ್ಲಿದ್ದರೆ ನಮ್ಮ ಕಣ್ಣಿಗೆ ಕಾಣುವುದಿಲ್ಲ ಎಂದು. ಇದನ್ನು ಬಹಳ ಹಿಂದೆಯೇ ರೋಸ್ವೆಲ್ ಘಟನೆ ಮತ್ತು ಪ್ರಾಜೆಕ್ಟ್ ಬ್ಲೂ ಬುಕ್ ನಂತರ ಅಮೇರಿಕಾ ಸರಕಾರದ ಹೇಳಿಕೆ-ವರದಿಗಳಲ್ಲಿ:-*
*ಅಪೋಲೋ- ವಾಯೇಜರ್ ಮುಂತಾದ ಗಗನಯಾನ ನೌಕೆಗಳಿಂದ ಆಯ್ದ ಚಿತ್ರದಾಖಲೆಗಳಲ್ಲಿ ಚಂದ್ರ, ಮಂಗಳ, ಶುಕ್ರನಲ್ಲಿ " ಏನೂ" ಕಾಣಲಿಲ್ಲ...ಬರೇ "ಖಾಲಿ ಬೆಂಗಾಡು ಇಲ್ಲವೇ ಕೊರೆತದ ಬರಡು ಭೂಮಿಯಂತೆ" ಈ ಗ್ರಹಗಳು ಎನ್ನಲಾಗಿದೆ.*

- *ಆದರೆ ಈ ಪ್ರತಿಕೂಲ ಹವಾಮಾನವನ್ನು ಎದುರಿಸಲು ಮುಂದುವರೆದ ಜನಾಂಗದವರಾದವರು ಅಲ್ಲಿ ನೆಲಮಾಳಿಗೆ ಲೋಕವನ್ನೇಕೆ ಕಟ್ಟಿಕೊಂಡಿರಬಾರದು?..ಅವರು ನಮ್ಮ ಕಣ್ಣಿಗೆ ಬಿದ್ದರೆ ಮಾತ್ರ ಸತ್ಯವೆ?*
- *ಇವರನ್ನು UFOlogists ಪ್ರಶಿಸಿದ್ದಾರೆ: "ಅಲ್ಲೇನು ಹುಡುಕಲು ಹೋದಿರಿ ಮತ್ತೆ...ಎಲ್ಲಿ?...ಗ್ರಹದ ನೆಲದ ಮೇಲೆಯೇ, ಅದರ ಅಂಡರ್ ಗ್ರೌಂಡ್ ನಲ್ಲೆ? ಬರೇ 3-ಡೈಮೆನ್ಷನ್ ಜೀವಿಗಳು ಬೇಕಿತ್ತೆ ನಿಮಗೆ?" ಎಂದೆಲ್ಲಾ...*
- *"ಚಂದ್ರನಲ್ಲೂ ಯಾರೂ ಇರಲಿಲ್ಲ, "ನಿರ್ಜನ ಪ್ರದೇಶ" ಎಂದುಬಿಟ್ಟಿರಿ, ಹೇಗೆ?..." ಎಂದು ಪ್ರಶ್ನಿಸಿದ್ದವರಿದ್ದಾರೆ.*

*ನಾವೂ ಹೀಗೆ ಕೇಳಬಹುದು:*
*ಅಲ್ಲೇನು, ನಮ್ಮ ಸಿನೆಮಾ ಹೀರೋ ಹೀರೋಯಿನ್ ತರಹದ ಆಕರ್ಷಕ ವ್ಯಕ್ತಿತ್ವದವರು ಎದುರುಗೊಂಡು, ನಿಮಗೆ ಇಳಿದಾಗ "ಬನ್ನಿ ಬನ್ನಿ, ಈಗ ತಾನೇ ಕುಕ್ಕರ್ ಇಟ್ಟಿದ್ದೇವೆ...ಊಟ ಮಾಡಿಕೊಂಡೇ ಹೋಗಿ" ಎಂದು ಉಪಚರಿಸಬೇಕಿತ್ತೆ? ಆಗ ಮಾತ್ರ ಒಪ್ಪುತ್ತಿದ್ದಿರೋ?* ☺
*ಸ್ವಲ್ಪ ಯೋಚಿಸಿ, ನಿಜ ತಾನೆ!*
*ಯಾವ ಸಕಾರಾತ್ಮಕ ಉತ್ತರವೂ ಅಧಿಕೃತವಾಗಿ ಬಂದಿಲ್ಲ... ಇದೂ ನಮಗೆ ಈಗಾಗಲೇ ತಿಳಿದ ವಿಷಯ.*

*ಆದರೆ ನಾವು ಮುಂದೆ ನೋಡೋಣ...ಹಲವಾರು contactees, ಅಪಹರಣವಾದ ನಮ್ಮ ಜನರೇ ಹೇಳಿದ ಸಾಕ್ಷಿ, ದೊರೆತ ಸಂದೇಶಗಳ ಪ್ರಕಾರ ಯಾವ್ಯಾವ ಲೋಕಗಳಿವೆ (ಸೌರವ್ಯೂಹ, ತಾರಾಮಂಡಲ, ಗೆಲಾಕ್ಸಿ ಎಂಬೆಲ್ಲಾ ಪದಗಳನ್ನು ಸೇರಿಸಿ ಸರಳವಾಗಿ ಹೀಗೆ ಕರೆಯೋಣ!). ಅಲ್ಲೆಲ್ಲಾ ಎಂತೆಂತಾ ಜೀವಿಗಳಿದ್ದಾರೆ, ಹೇಗಿದ್ದಾರೆ, ನಮಗೆ ಅವರ ಬಗ್ಗೆ ಏನು ಗೊತ್ತು ಎಂಬುದನ್ನು:*

## 5.3 ಅನ್ಯಗ್ರಹ ಜೀವಿಗಳು ಮತ್ತು ಅವರ ವಿಳಾಸ:

<u>ಸುಲಭ ಇಂಗ್ಲೀಷಿನಲ್ಲಿದೆ , ಓದಿ:</u>




*ಒಂದು ಪುಸ್ತಕದಲ್ಲಿ ದೊರೆತ ಮಾಹಿತಿಗಳು: (ಬೇರೆ ಕಡೆ ಸಿಕ್ಕ ಮಾಹಿತಿಯನ್ನೂ ಕೊಡುವೆ, ನನಗೆ ಇದಕ್ಕಿಂತಾ ಹೆಚ್ಚಿನದೇನೂ ತಿಳಿದಿಲ್ಲ...ನಂಬುವವರು ನಂಬಿ!!)*


ALLGRUULK
(aka "the builders)

1. ALLGRUULK:

*ಇವರು ಸ್ಕಲ್ಬರ್ ಲೋಕದವರಂತೆ, ಇವರಿಗೆ 230 ವರ್ಷ ಆಯಸ್ಸು...ರೆಪ್ಟಿಲಿಯನ್ಸ್ ಅಂದರೆ ಹಲ್ಲಿ / ಮೊಸಳೆ ಜಾತಿಯಿಂದ ಮುಂದುವರೆದ ಜೀವಿಗಳು...ಗಗನನೌಕೆ ಕಟ್ಟುವುದರಲ್ಲಿ ತಜ್ಞರು...ಹೊಸ ಹೊಸ ವಿನ್ಯಾಸ, ಸಾಮಗ್ರಿಗಳನ್ನು ಹುಡುಕುತ್ತಾ  ಲೋಕದಿಂದ ಲೋಕಕ್ಕೆ ಅಲೆಯುತ್ತಿರುತ್ತಾರಂತೆ. ಜಪಾನಿನಲ್ಲಿ 2005 ರಲ್ಲಿ ಕಾಣಿಸಿದ್ದರು ಎನ್ನುತ್ತಾರೆ.*

2. ***PLEIDIANS:*** *https://rationalwiki.org/wiki/Pleiadians*



*ಪ್ಲೆಯ್ಡಿಸ್ ತಾರೆಯ ಬಳಿ ಇರುವ ಎರ್ರಾ ಹತ್ತಿರದ ಟೇಗೆಟ್ಟಾ ಎಂಬ ಗ್ರಹದವರಂತೆ. ಇದು ಇರುವುದು ಟೋರಸ್ ಅಥವಾ ವೃಷಭ ರಾಶಿಮಂಡಲದಲ್ಲಿ!.. ಈ ಪ್ಲೆಯ್ಡಿಯನ್ಸ್- ಯೂರೋಪಿನ ಜಾನಪದದಲ್ಲಿಯೂ ಇದ್ದಾರೆ! ...ಬಹಳ ಹಿಂದಿನಿಂದ ಯೂರೋಪಿಯನ್ ವಂಶಜರಿಗೆ ಒಂದು ಕಾಲದಲ್ಲಿ ತಳಿ ಮಾಡಿಕೊಟ್ಟ ಪೂರ್ವಜರು ಇವರೇ ಎನ್ನುತ್ತಾರೆ. ಹಳದಿ ಬ್ಲಾಂಡ್ ಕೂದಲಿನ 8 ಅಡಿ ಎತ್ತರದ "ಆಧ್ಯಾತ್ಮಿಕವಾಗಿ ಮುಂದುವರೆದ ಜೀವಿಗಳು". ನಮಗೆ ತಿಳಿದ ಅತ್ಯಂತ ಹಳೇ ಕಾಲದ (10,000 ಬಿಸಿ) ಗೆಳೆಯರು ಇವರಂತೆ...ಸ್ನೇಹಮಯಿ, ಸಶಕ್ತ ಹಾಗೂ ಯಾವುದೇ ವೈರತ್ವ ಸಾಧಿಸದ ಶಾಂತ ಜೀವಿಗಳು. ಭೂಮಿಗೆ ನಾವು ಗೆಳೆಯರು ಎಂದು ಹೇಳಿಕೊಳ್ಳುತ್ತಾರೆ...ಅವರ ವಾಹನ- ಬೀಮ್ ಶಿಪ್ಸ್ ಈ ವಿಶ್ವದಲ್ಲೆ ಕಂಡರಿಯದಷ್ಟು ಆಧುನಿಕವಂತೆ. ಅವರು ನಮಗೆ "ಮೆಂಟಲ್ ಸ್ಕಿಲ್ಸ್"( ಮಾನಸಿಕ ಕೌಶಲ್ಯ) ಹೇಳಿಕೊಡಲೆಂದೇ ಬರುತ್ತಿರುತ್ತಾರಂತೆ. ಅವರು ದೇಹವನ್ನು ಮೂರರಿಂದ ಒಂಬತ್ತನೇ ಆಯಾಮಗಳಿಗೂ ಬದಲಿಸಿಕೊಳ್ಳಬಲ್ಲವರು. ನಮಗೆ ರೀಕಿ ಮತ್ತು ಅರೋಮಾ ಥೆರಪಿ ಬಗ್ಗೆ ಹೇಳಿಕೊಟ್ಟಿದ್ದು ಇವರೇ ಅಂತೆ...*

"they exist solely in the fifth dimension[4] (which is apparently made of love and creativity), or just live in non-specific dimensions higher than three"

3. *EBENs:*

*ನಮ್ಮ ಸೌರವ್ಯೂಹದಲ್ಲಿ ಕಂಡು ಬರುವ ರೆಟಿಕ್ಯೂಲಿ ತಾರಾಮಂಡಲದ ಸೆರ್ಪೋ ಗ್ರಹದಲ್ಲಿ ಇವರ ತವರು ಮನೆ...ನಮ್ಮ ಸೌರವ್ಯೂಹದಲ್ಲಿ ಕಂಡುಬರುವ ಅತ್ಯಂತ ಸಾಮಾನ್ಯ ಆದರೆ ಬಹಳ ಆಧುನಿಕ ಜೀವಿಗಳು. ಹಲವಾರು ಜೈವಿಕ ಬದಲಾವಣೆ ಮಾಡಿ ಬೇರೆ ಗ್ರಹಗಳನ್ನು ಗೆದ್ದು ಅಲ್ಲಿ ಅನ್ಯ ಜೀವಿಗಳನ್ನು ಹುಟ್ಟುಹಾಕಿ ಕಾಲನಿ*

***ಮಾಡಿಕೊಂಡು ಮುಂದೆ ಹೋಗುವವರಂತೆ.*** ಇವರು ಗ್ರೇಯ್ಸ್ **(6)** ಗಿಂತಲೂ ಮುಂದುವರೆದವರಂತೆ..




4. ***KURS ( anunnaki): ಇವರೂ ನಮಗೆ ತಿಳಿಯದವರೇನಲ್ಲ.***
*ನಿಬಿರು ಎಂಬ ಪೌರಾಣಿಕ **12**ನೇ ಗ್ರಹದ ಅನುನ್ನಾಕಿ ಎಂಬ ಜನಾಂಗದ ನಂತರ ಬಂದವರು ಇವರು. ಇವರು ನಮ್ಮ ಶಿಲಾಯುಗದ ಪೂರ್ವಜರ "ಸಂತಾನದ ಪ್ರಗತಿಗೆ" ನೆರವಾದವರಂತೆ...ಎಲ್ಲಾ ಅವರಿಗೆ ಹೇಳಿಕೊಟ್ಟರಂತೆ !*





*ಇವರು ಡಿಲಿಮುನ್ಸ್ ಎಂಬ ಗ್ರಹದವರಂತೆ. ಇವರೀಗ ಬಹು ಶತಮಾನಗಳ ನಂತರ ಇಲ್ಲಿಗೆ ಮತ್ತೆ ಬರಲಾರಂಭಿಸಿದ್ದಾರಂತೆ. ಕೆಲವು ವಿದೇಶಿ ಸರಕಾರಗಳು ಇವರನ್ನು ಆಹ್ವಾನಿಸಿದ್ದಾರೆನ್ನುತ್ತಾರೆ.!! ಅವರು ನಡುನಡುವೆ ಬಂಗಾರದ ದ್ರವ್ಯದಲ್ಲಿ ಮುಳುಗಿದ್ದುಕೊಂಡು ತಮ್ಮ ಆಯುಷ್ಯವನ್ನೂ ಹೆಚ್ಚಿಸಿಕೊಳ್ಳುತ್ತಿರುತ್ತಾರಂತೆ (ಆಯುರ್ವೇದದಲ್ಲಿ ಚಿನ್ನವನ್ನು ಬಳಸಿ ಎನ್ನುವುದು ಇದಕ್ಕೇ ಏನು?)*

*ಓದಿ: http://www.goldgold.com/gold-and-how-it-affects-the-body.html*

5. *ರಾಮೇ : ಇವರು ಆರಿಗಾ ಗ್ರಹಕೂಟದ ಕ್ಯಾಪೆಲ್ಲಾದವರು. ಇವರು ತಮ್ಮ ಗ್ರಹವನ್ನು ಬಿಟ್ಟು ಬಂದು ದ. ಅಮೇರಿಕಾದ ಮಾಯನ್ ನಾಗರೀಕತೆಯಲ್ಲಿ ಭಾಗಿಯಾಗಿದ್ದರು. ಇವರು ವಿಜ್ಞಾನಿ ಮತ್ತು ಖಗೋಳ ಶಾಸ್ತ್ರಜ್ಞರಂತೆ. ಮಾಯನ್ನರಿಗೆ ಎಲ್ಲಾ ಕಲಿಸಿಕೊಟ್ಟು ಅವರು ಪ್ರಗತಿ ಹೊಂದಿದ ನಂತರ ತಮ್ಮ ಗ್ರಹಕ್ಕೆ ವಾಪಸಾದರಂತೆ! ಇದು ಮಾಯನ್ನರ ಶಿಲೆ ಮತ್ತು ಚಿತ್ರ ದಾಖಲೆಗಳಲ್ಲಿದೆ. ( ಇಂತವನ್ನು ಮೊದಲ ಅಧ್ಯಾಯದಲ್ಲಿ ಉಲ್ಲೇಖಿಸಿದೆ).*



RAMAY

*2001 ರ ನಂತರ ಮತ್ತೆ ಕಾಣಿಸಿಲ್ಲ.*

6. *ಗ್ರೇಯ್ಸ್: (GREYS): ಭೂಮಿಯಲ್ಲಿ ಅತ್ಯಧಿಕವಾಗಿ ಕಾಣುವ ಮತ್ತು ಜನಪ್ರಿಯ ಸಾಹಿತ್ಯದಲ್ಲಿ ಚಲನಚಿತ್ರಗಳಲ್ಲಿ ತೋರಿಸುವ ಜೀವಿಗಳು ಇವರೇ. ಬೂದಿ ಬಣ್ಣದ ಕುಳ್ಳ ಚತುರರು ಅಥವಾ ಖದೀಮರು!.*








*ವಿಟ್ಲೀ ಸ್ಟ್ರೀಬರ್ ಎಂಬವರು ಬರೆದ ಅತ್ಯಧಿಕ ಮಾರಾಟವಾದ, ನಂತರ ಚಿತ್ರವೂ ಆದ Communion ಪುಸ್ತಕ ಈ ಗ್ರೇಯ್ಸ್ ಬಗ್ಗೆಯೇ ಇದ್ದದ್ದು. ಇವರು ಹಾರುವ ತಟ್ಟೆಗಳಲ್ಲಿ ಬಂದು ಮಾನವರನ್ನು ಅಪಹರಣ ಮಾಡಿ ಹಲವು ಜೈವಿಕ ಪ್ರಯೋಗಗಳನ್ನು ಮಾಡಿ ನಮ್ಮ ಮಿಶ್ರತಳಿ ಮಾಡುತ್ತಾರೆಂಬ ಆರೋಪವಿದೆ. ಜೀಟಾ ರೆಟಿಕ್ಯುಲಿ ಎಂಬ ಎರಡು ಸೂರ್ಯಗಳುಳ್ಳ ಗ್ರಹಮಂಡಲದವರಂತೆ ಇವರು. ಇವರನ್ನು ಹೆಚ್ಚಾಗಿ 'ಕ್ಷುದ್ರ' ಜೀವಿಗಳು, ಬೇರೆಯೇ "ಮೇಲಿನ" ಪೀಳಿಗೆಗೆ ದುಡಿಯುವ ಕ್ಲೋನ್ ಆಗಿ ಹುಟ್ಟಿದ "ಗುಲಾಮ" ಜೀವಿಗಳೂ ಎಂದು ಅನ್ನಲಾಗಿದೆ. ಒಟ್ಟಾರೆ ಬಹಳ ನಾಟಕೀಯ ಕತೆ*

*ಪುಕಾರುಗಳೂ ಇವರ ಬಗೆಯೇ ಇರುವುದು.!!*

*Close encounters of the third kind ಎಂಬ ಜನಪ್ರಿಯ ಸ್ಟೀವನ್ ಸ್ಪಿಯಲ್ ಬರ್ಗ್ ಚಿತ್ರದಲ್ಲಿ ಇವುಗಳ ಮಾದರಿ ತೋರಿಸಲಾಗಿದೆ.*

*ರೋಸ್ವೆಲ್ ಘಟನೆ ಮತ್ತು ಸ್ಟ್ರೀಬರ್ ಪ್ರಕಾರ ಇವರ ತಾರಾ ನಕ್ಷೆ ಹೀಗಿದೆ:*
*(ಈ ಗ್ರಹಮಂಡಲ ನಮ್ಮ ಪ್ರಕಾರ ಇದೆ, ಟೆಲಿಸ್ಕೋಪಿನಲ್ಲಿ ಕಾಣಿಸುತ್ತದೆ!)*




*ಇವರಲ್ಲೇ ಉತ್ತಮವಾದ ಸ್ನೇಹ-ಪರ ನೆರೆಗ್ರಹದವರೂ ಇದ್ದಾರಂತೆ. ಅವರೇ- ಸೋಲಿಪ್ಸಿ ರೈ. ಅವರು ಅನುನ್ನಾಕಿ ಜೀವಿಗಳಿಗೆ ಸಹಾಯಮಾಡಿ ನಮ್ಮ ಪುರಾತನ ನಾಗರೀಕತೆಗಳಿಗೆ ಬಹಳ ನೆರವಾದವರು ಎನ್ನಲಾಗಿದೆ.*
*ಓದಿ...*

https://alien-races-extraterrestrials.blogspot.com/2017/07/solipsi-rai.html

*ಹೀಗೇ ಇನ್ನೂ ಹಲವಾರು ವಂಶದ ಚಿತ್ರವಿಚಿತ್ರ ಬಗೆಯ ಜೀವಿಗಳಿದ್ದಾವೆ. ಮುಂದೊಮ್ಮೆ ಪುಸ್ತಕ ಬರೆದರೆ ವಿಸ್ತಾರವಾಗಿ ಬರೆಯುವೆ.*

***Alien races ಎಂಬ PDF ಪುಸ್ತಕವಿದೆ. ಕೊನೆಯಲ್ಲಿ ವಿವರ ಕೊಡುತ್ತೇನೆ.***

# 8ನೇ ಕಂತು:

# © ನಾಗೇಶ್ ಕುಮಾರ್ ಸಿಎಸ್

~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~

~~~~~~~~~~

## 8. ಅವರನ್ನೇ ಅಟ್ಯಾಕ್ ಮಾಡಿದರೆ?...ದಾಳಿಯ ವಿವರ ಮತ್ತು ಅದರ ಮರ್ಮ:

### 8.1. ಅವರು ಬೇಡ ಎಂದಾಗ ನಮ್ಮ ಅಣ್ವಸ್ತ್ರ ಟೆಸ್ಟ್ ನಿಲ್ಲಿಸಬೇಕು, ಇಲ್ಲವಾದರೆ ಹಲವು ಬಾರಿ ಹೊಡೆದುರುಳಿಸಿದ್ದಾರೆ...!

ಈಗಾಗಲೇ ಚರ್ಚಿಸಿದಂತೆ ಅನ್ಯಗ್ರಹ ಜೀವಿಗಳು ಈ ಅಣ್ವಸ್ತ್ರ/ ಪರಮಾಣು ಶಸ್ತ್ರಾಸ್ತ್ರಗಳು, ಅದರಿಂದ ಉಂಟಾಗುವ ಅಪಾಯಗಳನ್ನು ಶತ-ಶತಮಾನಗಳ ಹಿಂದೆಯೇ ಅಂತಾ ದುಬಾರಿ ತಪ್ಪನ್ನು ತಾವೂ ಮಾಡಿ ಅರಿತಿದ್ದಾರಂತೆ... ಹಲವಾರು ಅನ್ಯಗ್ರಹಿಗಳು ತಂತಮ್ಮ ಗ್ರಹಗಳನ್ನೇ ಅದಕ್ಕೆ ಬಲಿಕೊಟ್ಟು, ವಿನಾಶವಾಗಿ ಆ ಸೌರವ್ಯೂಹವನ್ನೇ ಬಿಟ್ಟು ಬೇರೆಡೆ ನೆಲೆಸಬೇಕಾದಂತಾ ಪಾಡು ಪಟ್ಟವರಂತೆ. (ಮುಂದಿನ ಅಧ್ಯಾಯದಲ್ಲಿ 'ನಿಬಿರು' ಎಂಬ 9ನೇ ಗ್ರಹದ ಕತೆಯನ್ನು ಹೇಳುವೆ).

ಆಗಲೇ ತಮಗೆ ತಿಳಿದ ಎಲ್ಲಾ ಸಂಪರ್ಕ ಸಾಧನಗಳ ಮೂಲಕ ಅಮೇರಿಕಾ, ರಷ್ಯಾರನ್ನು ಈ ಬಗ್ಗೆ – '**ಬೇಡ , ಸುಲಭವಾಗಿ ತಡೆಯಬಲ್ಲೆವು'** ಎಂದು ಎಚ್ಚರಿಸಿದರೆ, ಕೇಳುವ ತಾಳ್ಮೆ, ಮನಸ್ಸು ಇದೆಯೆ ನಮ್ಮ ಯುದ್ಧದಾಹಿ ಸೂಪರ್ ಪವರುಗಳಿಗೆ?

ಊಹೂಂ!... ನಮ್ಮವರು "ಅರೆ , ಹೋಗಯ್ಯ ನೀನ್ಯಾವ ದಾಸಯ್ಯ, ಬ್ಲಫ್ ಮಾಡಬೇಡ" ಅಂದುಕೊಂಡರಂತೆ!

ಎರಡು ಘಟನೆಗಳಲ್ಲಿ ನಾವು ಹೀನಾಯವಾಗಿ ಅಣ್ವಸ್ತ್ರ ಟೆಸ್ಟ್ ಸಮಯದಲ್ಲೇ ಸೋತಿದ್ದನ್ನು ಆಗಿದ್ದ ಡಿಫೆನ್ಸ್ – ಏರ್ ಫೋರ್ಸ್ ಸೇನಾಧಿಕಾರಿಗಳು ಹೊರಬಂದು ಮಾಹಿತಿ ಸ್ಫೋಟಿಸಿದ್ದಾರೆ:

#### 1. ಮ್ಯಾಮ್ ಸ್ಟ್ರಾಂ ಏರ್ಫೋರ್ಸ್ ಬೇಸ್, ಮೋಂಟಾನಾ, ಯು ಎಸ್ ಎ




**ಮಾರ್ಚ್ 24, 1967 ರಲ್ಲಿ Malmstrom Airforce Base ನಲ್ಲಿ... ಅಲ್ಲಿನ ಭೂಮಿಯ 60 ಅಡಿ ಕೆಳಗೆ ಸುರಕ್ಷಿತ ಬಂಕರುಗಳಲ್ಲಿ 10 ಟೆಸ್ಟ್ ಮಾಡಲು ಸಿದ್ಧವಾದ ಅಣ್ವಸ್ತ್ರಗಳಿದ್ದವು. ಅದರ ಅಧಿಕಾರಿ ಕ್ಯಾ|| ರಾಬರ್ಟ್ ಸಲ್ಲಾಸ್ ಕೆಳಗಿನ ವಿಡಿಯೋದಲ್ಲಿ ನಡೆದುದರ ವರದಿ ಕೊಟ್ಟಿದ್ದಾರೆ:**

*https://www.youtube.com/watch?v=VgziDyPSUog*

*"ನಾನು ಮತ್ತು ನನ್ನ ಕಮಾಂಡರ್ ಫ್ರೆಡ್ ಡ್ಯೂಟಿಯಲ್ಲಿದ್ದೆವು. ಅವರು ಸ್ವಲ್ಪ ಹೊತ್ತು ಮಲಗಿದ್ದರು..ನಮ್ಮ ಪ್ರತಿ ಮಿಸೈಲಿನಲ್ಲಿ 800 ಕಿಲೋ ಟನ್ ಅಣ್ವಸ್ತ್ರ ಲೋಡ್ ಇತ್ತು. ಬೆಳಿಗ್ಗೆ ಅದನ್ನು ನಾವು ಉಡಾಯಿಸಿ ಟೆಸ್ಟ್ ಮಾಡಬೇಕಿತ್ತು. ನನಗೆ ಮುಂಜಾನೆ ಒಂದು ಫೋನ್ ಕಾಲ್*

*ಬಂತು. ಅದು ನಮ್ಮ ಹೊರಗಿನ ಗೇಟಿನ ಪಹರೆ ಕಾಯುತ್ತಿದ್ದ ಸೆಕ್ಯುರಿಟಿ ಗಾರ್ಡಿನದು. "ನಮ್ಮ ಗೇಟಿನ ಮೇಲೆ ಆಗಸದಲ್ಲಿ ಕೆಂಪು ಬಣ್ಣದ ಪ್ರಕಾಶಮಾನವಾದ ಹಾರುವ ತಟ್ಟೆಯಂತಾ ವಾಹನ ಕಾಣಿಸಿಕೊಂಡಿದೆ..."*




*...ಅದು ಬಹಳ ವಿಚಿತ್ರ ರೀತಿಯಲ್ಲಿ ಎತ್ತೆತ್ತಲೋ ಹಾರುವುದು, ದಿಕ್ಕ ಬದಲಿಸುವುದು, ನಿಲ್ಲುವುದು, ಇದ್ದಕ್ಕಿದ್ದಂತೆ ದೂರ ಹೋಗಿ ಸಮೀಪಕ್ಕೆ ಬರುವುದು ಮಾಡುತ್ತದೆ, ಕೊಂಚ ಕೂಡ ಸದ್ದು ಬರುತ್ತಿಲ್ಲ! ಇದು ನಮ್ಮನ್ನು ಆತಂಕಗೊಳಿಸಿದೆ." ಎಂದು ಕೂಗುತ್ತಿದ್ದ. ಅಲ್ಲಿ ಮೇಲೆ ಆಗಸದಲ್ಲಿ ಇದು ನಡೆಯುತ್ತಿದ್ದರೆ ಭೂಗರ್ಭದ 60 ಅಡಿ ಬಂಕರುಗಳಲ್ಲಿ ವಿವರಿಸಲಾಗದ ಅವಘಡ ಆಗುತ್ತಿದೆ, ಅವರೂ ಆತಂಕದಿಂದ ಕೂಗಹತ್ತಿದ್ದಾರೆ. ನಾನು ಆಗ ನನ್ನ ಕಮಾಂಡರ್ ಫ್ರೆಡ್ ರನ್ನು ನಿದ್ದೆಯಿಂದ ಎಚ್ಚರಿಸಿದೆ.*

*ಇದ್ದಕ್ಕಿದ್ದಂತೇ...*

***ನಮ್ಮ ಕಂಟ್ರೋಲ್ ಪ್ಯಾನೆಲ್ಲಿನಲ್ಲಿ 10 ಹಸಿರು ದೀಪಗಳು ಕಾಣುತ್ತಿದ್ದ ಅಣ್ವಸ್ತ್ರಗಳು ಒಮ್ಮೆಲೇ ಕೆಂಪಿಗೆ ತಿರುಗಿದವು...ಅಂದರೆ ನಾವು ಲಾಂಚ್ ಮಾಡಬೇಕಾದ ಹತ್ತೂ ಅಣ್ವಸ್ತ್ರವನ್ನೂ ನಿಷ್ಕ್ರಿಯ- (ಡಿ ಆಕ್ಟಿವೇಟ್) ಮಾಡಲಾಯಿತು***. *ನಮಗೆ ತಿಳಿಯದೇ ಹಾಗಾಗಲು ಸಾಧ್ಯವೇ ಇರಲಿಲ್ಲ! ನಮ್ಮ ಸಿಬ್ಬಂದಿಯಿದ್ದವರು- "ಎಲ್ಲಾ ಹೋಯಿತು, ಯಾರು ಮಾಡುತ್ತಿದ್ದಾರೆ?" ಎಂದು ಗಾಬರಿಯಾದರು! ನಮ್ಮ ಅಮೇರಿಕಾದ ಹಲವು ಮಟ್ಟದ ಸೆಕ್ಯುರಿಟಿ ಮುರಿದು, ಸುಲಭವಾಗಿ ಭೇಧಿಸಿ 'ಯಾರೋ ಎಲ್ಲಾ ಹಾಳು ಮಾಡಿಬಿಟ್ಟರು. ಹೀಗೆಲ್ಲಾ ಮಾಡಲು ಯಾರಿಗೂ ಅಲ್ಲಿ ಅಧಿಕಾರವೇ ಇರಲಿಲ್ಲ' ಎನ್ನುತ್ತೇನೆ. ಆಗ ನಮಗೆ ತಿಳಿದು ಬಂತು:- ಹೋದ ವಾರವೂ ನಮಗೆ ತಿಳಿಯದಂತೆ ಇನ್ನೊಂದು ಇಂತಾ ಹಾರುವ ತಟ್ಟೆ ಅಲ್ಲಿಗೇ ಬಂದು ಕಾಣಿಸಿದಾಗ ನಮ್ಮ ಇನ್ನೊಂದು ಬ್ಯಾಚಿನ ಶಸ್ತ್ರಾಸ್ತ್ರಗಳನ್ನು ಹೀಗೇ ಆಫ್ ಮಾಡಿ, ಮತ್ತೆ ಆಗಲೇ ರಿಪೇರಿಯಾಗದಂತೆ ಮಾಡಿಬಿಟ್ಟಿತ್ತಂತೆ. ಅದೂ ನಮ್ಮವರಿಗೆ ಗೊತ್ತಿತ್ತು!*

*'ನನ್ನ ಪ್ರಕಾರ ನಮ್ಮ ಬಳಿ ಅತ್ಯಾಧುನಿಕ ಸೌಲಭ್ಯ, ಉಪಕರಣ, ಸೀಕ್ರೆಸಿ, ಕೋಡ್ ಎಲ್ಲಾ ಇದ್ದವು. ಇದನ್ನೆಲ್ಲಾ ಮುರಿದು ಅತಿಕ್ರಮಣ ಮಾಡಿ ಇದ್ದಕ್ಕಿದ್ದಂತೇ ಎಲ್ಲವನ್ನೂ ಒಟ್ಟಿಗೆ ಆಫ್ ಮಾಡಲು ಆ ಯು. ಎಫ್. ಓ. ಗೆ ಸಾಧ್ಯವಾದರೆ ನಾವೇನು ಮಾಡಲು ಸಾಧ್ಯ? ಅವರು ಕೆಳಗೇ ಇಳಿದು ಬರದೇ ಗಗನದಿಂದಲೇ ಈ ಕೆಲಸ ಮಾಡಿದ ನಂತರ ಆ ವಾಹನ ಕಾಣೆಯಾಯಿತು'..."*

*'ವಿಚಿತ್ರವೆಂದರೆ 24 ಗಂಟೆಯಾದರೂ ಈ ನಾವು ಅವನ್ನು ಸಕ್ರಿಯಗೊಳಿಸಲಾಗಲಿಲ್ಲ. ಮತ್ತೆ ಮಾಡಿದರೆ ಮತ್ತೆ ಅವರು ತಡೆಯುತ್ತಾರೆ. ಇದು ಖಂಡಿತಾ ಅನ್ಯಗ್ರಹಿಗಳ ಕೆಲಸ.." ಎನ್ನುತ್ತಾರೆ ರಾಬರ್ಟ್ ಸಲ್ಲಾಸ್.*

*ನಂಬಲರ್ಹ ನ್ಯೂಸ್ ವರದಿ CBS ನಲ್ಲಿಯೇ ಈ ದಾಖಲೆಯಿದೆ:* https://www.cbsnews.com/news/ex-air-force-personnel-ufos-deactivated-nukes/

## 2. ಅಮೇರಿಕಾದ ಅಣ್ವಸ್ತ್ರವನ್ನು ಇಟ್ಟಾಡಿಸಿ ಹೊಡೆದ ಅನ್ಯಗ್ರಹಿಗಳ ಶಸ್ತ್ರ!

***ಹೀಗೇ ಇನ್ನೊಂದು ಬೆಕ್ಕಸಬೆರಗಾಗುವ ಕೇಸಿನಲ್ಲಿ ಲಾಂಚ್ ಆದ ಅಮೇರಿಕಾದ ನ್ಯುಕ್ಲಿಯಾರ್ ಅಸ್ತ್ರದ ರಾಕೆಟ್ಟನ್ನು ಅನ್ಯಗ್ರಹದ ಶಸ್ತ್ರವೊಂದು ನಿರಾಯಾಸವಾಗಿ ಡಿಕ್ಕಿ ಇಕ್ಕಿ ಹೊಡೆದು ಬೀಳಿಸಿ ತನ್ನ ಪಾಡಿಗೆ ತಾನು ಹಾರಿ ಹೋಗುತ್ತಿದೆ:-***

**CNN News** ಅಧಿಕೃತ ಟಿವಿ ವಿಡಿಯೋನಲ್ಲಿ ಈ ಬಗ್ಗೆ ಲ್ಯಾರಿ ಕಿಂಗ್ ಸಂದರ್ಶನ ಮಾಡಿ ತೋರಿಸಿದ್ದಾರೆ, ನೋಡಿ (ಮತ್ತೆ ನಂಬಲರ್ಹ ಮೂಲ ಎಂದು ಹೇಳಬೇಕಿಲ್ಲ!)

https://www.youtube.com/watch?v=8GD4rOMVqCQ c




*1964 ರಲ್ಲೇ ವ್ಯಾಂಡೆನ್ಬರ್ಗ್ (ಕ್ಯಾಲಿಫೋರ್ನಿಯಾ) ಎಂಬ ಏರ್ ಫೋರ್ಸ್ ಬೇಸಿನಲ್ಲಿ ಉಢಾಯಿಸಿದ ಪರಮಾಣು ಶಸ್ತ್ರವನ್ನು ಅಂತರಿಕ್ಷದಲ್ಲಿ ಭೇಟಿಯಾದ ಒಂದು ಅನ್ಯಗ್ರಹ ರಾಕೆಟ್ಟು, ನಮ್ಮ ಶಸ್ತ್ರ ಸುಮಾರು 20,000 ಕಿಮೀ/ ಗಂಟೆ ವೇಗದಲ್ಲಿ ಹಾರುತ್ತಿದ್ದುದನ್ನೂ ಲೆಕ್ಕಿಸದೇ ಮಕ್ಕಳ ಆಟಿಕೆಯನ್ನು ಆಡಿಸುವಂತೆ ಇಟ್ಟಾಡಿಸಿಕೊಂಡು ಹೊಡೆದುರುಳಿಸಿ ತನ್ನ ಪಾಡಿಗೆ ತಾನು ಅದಕ್ಕಿಂತಾ ಅಧಿಕ ವೇಗದಲ್ಲಿ ಹಾರಿಹೋಗಿದೆ..ಇದಕ್ಕಿಂತಾ ಸಾಕ್ಷಿ ಬೇಕೇನು, ಅನ್ಯಗ್ರಹಜೀವಿಗಳು ಅಣ್ವಸ್ತ್ರಗಳ ಬಗ್ಗೆ ತಾವೇ ಕೊಡುವ ಎಚ್ಚರಿಕೆಯನ್ನು ಎಷ್ಟು ಸಮರ್ಥವಾಗಿ ಫಾಲೋ ಅಪ್ ಮಾಡಿ ನಡೆಸಿಕೊಳ್ಳಬಲ್ಲರು ಎಂದು??*

*ಈ ಪರಮಾಣು ಮಿಸ್ಸೈಲ್- "ವಿವರಿಸಲಾಗದ ಟೆಕ್ನಿಕಲ್ ಕಾರಣಗಳಿಂದ ಫೇಲಾಗಿ ತಪಕ್ಕನೆ ಭೂಮಿಗೆ ಬಿದ್ದು ಹೋಯಿತು" ಎಂದು ಕೈ ತೊಳೆದುಕೊಂಡಿತು ಸರಕಾರೀ ಸಂಸ್ಥೆಗಳು. ಅಲ್ಲವೆ ಮತ್ತೆ? ☺*

*...ಅತಿ ಅದ್ಭುತ ದೃಶ್ಯಾವಳಿ, ಪೂರ್ತಿ ವೀಕ್ಷಿಸಿ.. ಅಮೇರಿಕಾದ ಅಸ್ತ್ರದ ಸುತ್ತಲೂ ತಿರುಗಿ ಫೈರ್ ಮಾಡಿದೆ ಅದು...ಈ ವಿಡಿಯೋ ಫುಟೇಜ್ ಅನ್ನು ಅಮೆರಿಕಾದ ಸರಕಾರಿ ಅನ್ವೇಷಕ ಸಂಸ್ಥೆ ಸಿ. ಐ. ಎ. ವಶಪಡಿಸಿಕೊಂಡು ತೆಗೆದುಕೊಂಡು ಹೋಯಿತಂತೆ...ಆದ್ದರಿಂದ ಅವರಿಗೆ ಇನ್ನ್ಯಾವ ಲೀಕೇಜ್, ತನಿಖೆ ಆಗುವ ಭಯವಿಲ್ಲವೆಂದೇನೋ ಆಯಿತು...ಆದರೆ ಸಾರ್ವಜನಿಕರಿಗೆ? ಬರೀ ಪ್ರಶ್ನೆಗಳೇ ಉಳಿದವು.*

*ಹಲವಾರು ಬಾರಿ ಅನ್ಯಗ್ರಹಜೀವಿಗಳು ಹೇಳಿದ್ದಾಗಿದೆ. "ಇಂತಾ ಅನಾಹುತವನ್ನು ಸೃಷ್ಟಿಸಬೇಡಿ, ಎಲ್ಲರನ್ನೂ ಸರ್ವನಾಶ ಮಾಡಲು ನಿಮಗ್ಯಾವ ಹಕ್ಕಿದೆ?" ಎಂದು. ಅವರ ಮಾತನ್ನು ಕೇಳದಿದ್ದರೆ ಅವರು ಕುಳಿತ ಕಡೆಯಲ್ಲೇ ನಮ್ಮನ್ನು ನಿರ್ಬಂಧಿಸಬಲ್ಲರು, ಸೋಲಿಸಬಲ್ಲರು.*

*ಇದಾದ ನಂತರವೇ ಅಮೆರಿಕಾ ಕೂಡಾ ವಿಶ್ವರಂಗದಲ್ಲಿ ಬಹಿರಂಗವಾಗಿ "ಅಣ್ವಸ್ತ್ರ ನಿಷೇಧ, ನಿಯಂತ್ರಣ ,nuclear disarmament" ಎಂದು ಗದ್ದಲ ಮಾಡಲು ಆರಂಭಿಸಿದ್ದು. ಆದರೆ ಅವರು ಮಿಕ್ಕ ನಮಗೆ ಮಾತ್ರವೇ ಉಪದೇಶಿಸಿದ್ದು ಎಂಬುದು ಬೇರೆಯೇ ವಿಷಯ ಬಿಡಿ!!.*

## *8.2 ಸೂರ್ಯನೇ ಇವರ ಪೆಟ್ರೋಲ್ ಬಂಕ್ ಆಯಿತೆ?*






***https://www.youtube.com/watch?v=PyHzv-QpRls***

***https://www.youtube.com/watch?v=PyHzv-QpRls***

NASA ದ್ದು ಎಂದು ಹೇಳಲಾದ ಎರಡು ವಿಡಿಯೋದಲ್ಲಿ ಯಾವುದೂ ಅನ್ಯಗ್ರಹ ಜೀವಿಯ ವಾಹನ ಸೂರ್ಯನ ಬಳಿ ನಿಂತು ಅದರ ಪ್ಲಾಸ್ಮಾ ಎನರ್ಜಿ ಹೀರಿ (ಅದೊಂದು ರೀತಿಯ ಇಂಧನವಾಗಿದೆ) ತುಂಬಿಸಿಕೊಂಡು ಯಾವ ತೊಂದರೆಯಿಲ್ಲದೇ ಮುಂದೆ ಹೋಗಿದೆ… ಇಂತದು ಎರಡು ಬಾರಿ ನಡೆದದ್ದು ನಾಸಾದವರ ವಿಡಿಯೋಗಳಲ್ಲಿ ಇದೆ…ಹಲವು ಬಾಹ್ಯಾಕಾಶ ವೀಕ್ಷಕ ವಿಜ್ಞಾನಿಗಳು ಗುಪ್ತವಾಗಿ ಹೇಳಿದ್ದಾರೆ: "ನಮಗಿದೇನು ಎಂದು ಹೇಳಲು ಗೊತ್ತಿಲ್ಲ, ಸಹಜವಾದದ್ದಂತೂ ಈ ವಸ್ತು ಅಲ್ಲ…ಈ UFO ship, ಭೂಮಿಗಿಂತಾ 100 ಪಾಲು ದೊಡ್ಡದಿದ್ದಂತೆ ಕಾಣುವ ವಸ್ತು ಇದು!"

**ಅಯ್ಯೋ, ನಮ್ಮ ಸೂರ್ಯನ ಶಕ್ತಿಯನ್ನು ಹೀರುತ್ತಾರೆಯೆ? ಅದೂ ಫ್ರೀ ಆಗಿ?? ( ಪೆಟ್ರೋಲ್ ಡೀಸೆಲ್ ಬೆಲೆ ಎಂದು ನಾವು ಕೂಗಾಡುತ್ತಿರುವಾಗ!)**

**ಸೂರ್ಯನಿಗೆ ತಗುಲಿಯೂ  ಸುಡುವುದಿಲ್ಲ, ಭಸ್ಮವಾಗುವುದಿಲ್ಲ, ಇದನ್ನು ಯಾವ ವಸ್ತುವಿನಿಂದ ತಯಾರಿಸಿದರು ಮತ್ತೆ? ಉತ್ತರ ಹೇಳುವವರು ಸಿಕ್ಕಿಲ್ಲ, ತಾಳಿ!**

ಆಧಾರವಿರಲಿ ಬಿಡಲಿ, ಒಟ್ಟಿನಲ್ಲಿ ಮುಚ್ಚಿಡುವೆವು ಎಂಬ ಸರಕಾರಿ ಸೀಕ್ರೆಟ್ಸ್ ಆಕ್ಟ್ ಗೆ ಗಂಟುಬಿದ್ದು ಜನರಲ್ಲಿ ಭಯ, ಗೊಂದಲ, (ಜನ ದಂಗೆಯೇಳಬಹುದು ಎಂಬ ಭಯವಂತೆ!!…ಕರ್ನಾಟಕ ಸರಕಾರಕ್ಕಿಲ್ಲ ಈ ಭಯ ಎನಿಸುತ್ತದೆ, ಬಿಡಿ☺) ಉಂಟು ಮಾಡಬಾರದೆಂದು ಯಾವುದರ ಬಗ್ಗೆ ಕೇಳಿದರೂ-"ಇದೆಲ್ಲಾ ಸುಳ್ಳು, ಇದು ನಮ್ಮ ವೆದರ್ ಬಲೂನ್ ಪ್ರಯೋಗ, ನಮ್ಮದೇ ಟೆಸ್ಟಿಂಗ್, ಇದು ಆಪ್ಟಿಕಲ್ ಇಲ್ಯೂಷನ್, ಇದೆಲ್ಲಾ ನಿರಾಧಾರ" ಎಂಬ ಅಧಿಕೃತ ಹಾರಿಕೆ ಉತ್ತರಗಳನ್ನು ಅಮೇರಿಕಾ ಮತ್ತಿತರ ಸರಕಾರಗಳು ಹೇಳುತ್ತಲೇ  ಜತೆಜತೆಗೆ "ನೋಡಿ, ಇದೆಲ್ಲಾ ನಂಬದಿದ್ದರಿಂದ ಸಮಾಜ ಹೇಗೆ ಶಾಂತವಾಗಿದೆ ಈಗ?" ಎಂದು ಬೇರೆ ಅವರೇ ತಮ್ಮ ಬೆನ್ನು ತಟ್ಟಿಕೊಳ್ಳುತ್ತಾರೆಂದು UFOLOgists  ಆಪಾದಿಸುತ್ತಾರೆ.

## 8.3 UFO ಶೂಟ್ ಮಾಡಿ ಉರುಳಿಸೋಣವೆ? ಎಂದು ಯತ್ನಿಸಿದ ಇರಾನೀ ವಾಯುಸೇನೆ!

**https://www.youtube.com/watch?v=Ppb0RbyaSOM**







ಇತ್ತೀಚೆಗೆ ತಮ್ಮ ಟೆಹರಾನ್ ನಗರದ ಆಗಸದಲ್ಲಿ ಒಂದು ಅನ್ಯಗ್ರಹ ವಾಹನವನ್ನು ಕಂಡ ಇರಾನಿನ ವಾಯುಸೇನೆಯ ಭೂಪರು ಸುಮ್ಮನೇ ತಮ್ಮ ಸಾಮಾನ್ಯ ವಿಮಾನ ಧ್ವಂಸಕ ಕ್ಯಾನನ್ ( Anti aircraft shell) ಗಳಿಂದಲೇ ಅದನ್ನು ಹೊಡೆದುರುಳಿಸೋಣ ಎಂದು ವಿಫಲ ಯತ್ನ ನಡೆಸುವುದನ್ನು ಇಲ್ಲಿ ಕಾಣಬಹುದು. ನೂರಾರು ಶೆಲ್ ಗಳು ಸ್ಫೋಟಿಸಿದರೂ ಆ ವಸ್ತುವಿಗೇನೂ ಆಗದೇ, ತನ್ನ ಕೆಲಸ ತಾನು ಮುಗಿಸಿಕೊಂಡು ಆನಂತರವೇ ಮಾಯವಾಗಿ ಹೋಯಿತಂತೆ...ಹೀಗಿದೆ ನಮ್ಮ ಇರಾನಿ ಉತ್ತರಕುಮಾರರ ಪೌರುಷ!

**ಒಟ್ಟಿನಲ್ಲಿ ಸಾರಾಂಶ: "ನಾವು ಹೇಳಿದಂತೆ ನೀವು ಕೇಳಬೇಕು, ಸಹಕರಿಸಬೇಕು…ನಮ್ಮನ್ನು ನೀವು ಏನೂ ಮಾಡಲು ಸಾಧ್ಯವಿಲ್ಲ, ನಿಮ್ಮನ್ನು ನಾವು ಬೇಕಾದರೆ ಸುಲಭವಾಗಿ ಸೋಲಿಸಬಹುದು, ಏನೋ 'ಪಾಪ' ಅಂತಾ ಒಳ್ಳೆಯತನ ತೋರಿಸುತ್ತಿದ್ದೇವೆ…"ಎಂದಾಯಿತಲ್ಲವೇ ಇವರ ಸಂದೇಶದ ಮರ್ಮ?**

ಒಂದು ವಿಧದಲ್ಲಿ ಗುರುಗಳು ಒಬ್ಬ ಮೊಂಡು ಶಿಷ್ಯನನ್ನು ಕಂಡು, ಹಲವು ಬಾರಿ ಎಚ್ಚರಿಕೆ ಕೊಟ್ಟು, "ನನಗೆ ಕೋಪ ಬರಿಸಬೇಡ, ನನ್ನ ವಿಷಯ ನಿಂಗೊತ್ತಿಲ್ಲ" ಎನ್ನಲ್ಲವೆ?…ಹಾಗಾಯಿತು ಇಲ್ಲಿ!

**ಇದು ಸ್ವಲ್ಪ ಆತಂಕವಾಗುವಂತದ್ದೇ, ಗಾಬರಿಯಾಗುವಂತದ್ದೇ ಅಲ್ಲವೆ?…ಇನ್ನು ಅಮೇರಿಕನ್ ಸರಕಾರವನ್ನು ಈ ಬಗ್ಗೆ ನಿಜವಾಗಿಯೂ ದೂಷಿಸಲಾಗದು ಅಲ್ಲವೆ?…(ಪಾಪ, ಅವರ ಕಷ್ಟ ಅವರಿಗೆ!)**

ಹಾಗಾದರೆ 'ಇವರು ಯಾರು? ಎಲ್ಲಿಂದ ಬಂದು ನಮ್ಮ ಬಗ್ಗೆ ಇಷ್ಟೆಲ್ಲಾ ಆಸಕ್ತಿ ವಹಿಸುತ್ತಿದ್ದಾರೆ… ನಮ್ಮ ಹಣೇಬರಹ ಇವರಿಗೇಕೆ?' ಎನಿಸುವುದು ಸಹಜ. ಇದರಲ್ಲಿ ಕೆಲವರಿಗಂತೂ ಭೂಮಿಯ ಬಗ್ಗೆ ಯಾವುದೋ ಹಳೆ ನಂಟು ಇದ್ದಂತಿದೆ…ಮಿಕ್ಕವರಿಗೆ ನಾವು ಹೊಸ ಆಟದ ಸಾಮಾನು, ಪ್ರಯೋಗಾಲಯ ತರಹ ಇದ್ದರೂ ಇರಬಹುದು!

ಈ ಹಂತದಲ್ಲಿ ನಾನು ಅರೆ ವೈಜ್ಞಾನಿಕ, ಅರೆ ಪೌರಾಣಿಕ, ಅರೆ ಜಾನಪದ ನೆಲೆಯ ನಿಬಿರು ಎಂಬ ಗ್ರಹದ/ ಅಲ್ಲಿಯವರ ಬಗ್ಗೆ ಹೇಳಲೇ ಬೇಕಾಗುತ್ತದೆ.

## 8.4 ನಿಬಿರು ಆಳಿದ ದೇಶವೆ ಈ ಭೂಮಿ? ನಮ್ಮ ಪುರಾತನರೇ ಇವರು?

ಮೊನ್ನೆ ಮೊನ್ನೆ ಯಾವುದೋ 9ನೇ ಕ್ಷುದ್ರಗ್ರಹ ನಿಬಿರು ಎಂಬುದು ಎಲ್ಲ ಗ್ರಹಗಳಿಗಿಂತ ವಿರುದ್ಧವಾದ ಸಹಸ್ರಾರು ವರುಷದ ವಕ್ರ ಕಕ್ಷೆಯಲ್ಲಿ ಸುತ್ತುತ್ತಾ ಸೂರ್ಯ ಮತ್ತು ಭೂಮಿಯ  ಬಳಿ ಬರುವುದು, ಅದೇನಾದರೂ ಬಂದರೆ ಭೂಕಂಪವಾಗಿ ಸುನಾಮಿ, ಸಮುದ್ರ ಏರುತ್ತೆ, ಪ್ರಳಯ ಆಗುತ್ತೆ ಎಂದೆಲ್ಲಾ ವಾರ್ತಾವಾಹಿನಿಗಳು ಕಾರ್ಯಕ್ರಮ ಮಾಡುತ್ತಿದ್ದವು .

**ಹೌದು, ಇದೀಗ ಕ್ಯಾಲ್ಟೇಕ್ ವಿಶ್ವವಿದ್ಯಾಲಯದ ವಿಜ್ಞಾನಿಗಳು- ನಿಬಿರು (ಪ್ಲಾನೆಟ್ X) ಇರುವುದನ್ನು ಖಚಿತಪಡಿಸಿದ್ದಾರೆ!**




# ೯ನೇ ಕಂತು

## 9.1 ನಿಬಿರು ಎಂದರೇನು? ಎಲ್ಲಿದೆ? ನಮಗೇನು ಸಂಬಂಧ?

**ನಿಬಿರು(PLANET 9) ಗ್ರಹದ ವಕ್ರ ಕಕ್ಷೆ: ( ELEVATION VIEW)-**




## ನಿಬಿರು- PLANET 9- ಗ್ರಹದ ವಿರುದ್ಧ ದಿಕ್ಕಿನ ಸುತ್ತಾಟ ( Plan)




ನಮ್ಮ ಸೌರಮಂಡಲದ ಗುಪ್ತ ಗ್ರಹ ಅಥವಾ ಅತಿಥಿ ನಟನ ಹಾಗೆ 4,000- 10,000 ವರ್ಷಕ್ಕೊಮ್ಮೆ ನಮ್ಮ ಬಳಿ ಬಂದು ಹೋಗುವ ಭೂಮಿಗಿಂತಾ ಹತ್ತು ಪಟ್ಟು ಹೆಚ್ಚು ಗಾತ್ರವಿರುವ, ನೆಪ್ಚೂನ್ ಗ್ರಹಕ್ಕಿಂತಾ 20 ಪಟ್ಟು ಸೂರ್ಯನಿಂದ ದೂರದಲ್ಲಿರುವ ಈ ಭಾರಿ ಗ್ರಹವನ್ನು **ಪ್ಲಾನೆಟ್ X** ಎಂದು ಈಗ ತಾನೆ NASA ದ ವಿಜ್ಞಾನಿಗಳು ಗುರುತಿಸಿದ್ದರೆ, ಅದರ ಕರಾರುವಾಕ್ಕಾದ ವರ್ಣನೆ ಜಗತ್ತಿನ ಅತಿ ಪ್ರಾಚೀನ ನಾಗರೀಕತೆ ಎನ್ನಲಾದ ಸುಮೇರಿಯನ್ ನಾಗರೀಕತೆಯಲ್ಲಿ ದಂಡಿಯಾಗಿ ಸಿಗುತ್ತದೆ.

**ಇದೊಂದು ಅತ್ಯಾಶ್ಚರ್ಯಕರ ಬೆಳವಣಿಗೆ, ವಿಜ್ಞಾನ ಮತ್ತು ಪುರಾಣದ ಸಂಗಮ..Where Science Meets Myth/ Legend ಎನ್ನುತ್ತಾರೆ.**

**ಇಲ್ಲಿ ನಾವು ವಿಜ್ಞಾನ ಮತ್ತು ಪುರಾಣದ ಎರಡೂ ಮಜಲುಗಲನ್ನು ನಂಬುತ್ತಾ ಅಧ್ಯಯನ ಮುಂದುವರಿಸಲೇ ಬೇಕಾಗುತ್ತದೆ.**

**ಏಕೆಂದರೆ ಇಲ್ಲಿ ಕಾಲಮಾನದಲ್ಲಿ ವಿಜ್ಞಾನ ಕಿರಿಯ ಆದರೆ ಪುರಾಣ ಹಿರಿಯಣ್ಣ!**

**ಎಲ್ಲಿ ಕ್ರಿ ಪೂ. 4000 ನಲ್ಲಿ ಮಧ್ಯಪ್ರಾಚ್ಯದಲ್ಲಿತ್ತೆನ್ನಲಾದ ಆಧುನಿಕ ನಾಗರೀಕತೆಯ ಪುರಾಣ, ಎಲ್ಲಿ 21 ನೇ ಶತಮಾನದ ಅತ್ಯಾಧುನಿಕ ಟೆಲಿಸ್ಕೋಪಿನಲ್ಲಿ ಕಾಣುವ ಅದೇ ವರ್ಣನೆಯ ಕ್ಷುದ್ರಗ್ರಹ**?

“ನಾಗರೀಕತೆ” ಎಂದೆನಾ?..

ಆ 'ಕತೆ' ಗೆ ಇಲ್ಲಿ ಎರಡನೆ ಅರ್ಥವೂ ಇದೆ. ಅದೇ ಈ ನಾಗರೀಕತೆಯನ್ನು ಸ್ಥಾಪಿಸಿ ನಮ್ಮ ಆ ಕಾಲದಲ್ಲಿದ್ದ ಶಿಲಾ ಮಾನವನಿಗೆ ಹೊಸ ಜೀವ , ಜೀವನ ಎಲ್ಲವನ್ನೂ ಧಾರೆಯೆರೆದು ತಾವೇ ಇಲ್ಲಿನ ದೊರೆಗಳಂತೆ ಬಾಳಿದ ನಿಬಿರು ಗ್ರಹದ ದೇವರುಗಳು ಎನ್ನಲಾದ ಅನುನ್ನಾಕಿ ಎಂಬ ಅನ್ಯಗ್ರಹ ಜೀವಿಗಳ ಕತೆ!

(*ಸುಮೇರಿಯನ್ನರು ಅವರನ್ನು “ಆಗಸದಿಂದ ಧರೆಗಿಳಿದ ದೇವರುಗಳು” ಎನ್ನುತ್ತಾರೆ, ನಿಮಗೆ ಬೇಕಾದರೆ ದೇವಮಾನವರು ಎಂದಕೊಳ್ಳಿ!*)

ಒಬ್ಬ ವಿಜ್ಞಾನಿ ಮತ್ತು ಅನುನ್ನಾಕಿಯ ನಂಬಿಕಸ್ಥ ಸಂಶೋಧಕ ನಮಗೆ ಸವಾಲು ಹಾಕುತ್ತಾನೆ:- **“ಈ ದೇವರುಗಳೆಲ್ಲಾ ಆಕಾಶದಿಂದಲೇ ದೊಡ್ಡ ವಿಮಾನಗಳಲ್ಲಿ ಯಾವ್ಯಾವುದೋ ಲೋಕಗಳಿಂದ ಬಂದರು, ಅಲ್ಲಿಗೇ ಮತ್ತೆ ಮರಳಿದರು ಎಂದೇಕೆ ಎಲ್ಲಾ ನಾಗರೀಕತೆಯಲ್ಲೂ ಹೇಳುತ್ತೇವೆ? ಇಲ್ಲಿ ಹುಟ್ಟಿದವನೊಬ್ಬ ಎಲ್ಲರಿಗೂ ದೇವರಾದ ಎನ್ನುವುದಿಲ್ಲವೇಕೆ?”**

(***ಈಗಿನ ವಿಚಾರವಾದಿಗಳ ಮಾತಲ್ಲ, ಆಗಿನವರು ಯಾಕೆ 'ಹಾಗೆ ಮಾತ್ರ' ಹೇಳುತ್ತಿದ್ದರು?***).

ಅಲ್ಲದೇ ಅವರೇಕೆ- “**ಆಗಸದಿಂದ ಬಂದವರು -ನಮಗಿಂತಾ ಮುಂದುವರೆದ ವಿಶೇಷ ಶಕ್ತಿಗಳನ್ನು ಹೊಂದಿದವರು, ಚಿತ್ರವಿಚಿತ್ರ ಆಯುಧ, ಶಸ್ತ್ರಗಳನ್ನು ಹೊಂದಿದವರು, ಏನನ್ನಾದರೂ ಪಟಕ್ಕನೇ ಪವಾಡದಂತೆ ಸೃಷ್ಟಿಸಬಲ್ಲರು, ಇಲ್ಲಿದ್ದ ರಾಕ್ಷಸರನ್ನೂ ಶತ್ರುಗಳನ್ನೂ ಸುಲಭವಾಗಿ ಕೊಂದು ಇಲ್ಲಿದ್ದ ಜನಸಾಮಾನ್ಯರನ್ನು ಕಾಪಾಡಬಲ್ಲರು…? ಇಲ್ಲಿ ಅತ್ಯಾಧುನಿಕ ಸ್ವರ್ಗಸದೃಶ ಸಾಮ್ರಾಜ್ಯಗಳನ್ನು ಕಟ್ಟಬಲ್ಲವರಾಗಿದ್ದರು? ಆದರೆ, ನಮಗೇ ಏಕೆ ಸಾಧ್ಯವಾಗಿರಲಿಲ್ಲ?” ಎನ್ನುತ್ತಾನೆ ಆತ.**

ಹಿಂದೂ ಕ್ರಿಶ್ಚಿಯನ್, ಯೆಹೂದಿ, ಧರ್ಮಗಳನ್ನು ನೀವು ಪುರಾತನ ಧರ್ಮಗಳೆಂದು ಸ್ವೀಕರಿಸಿದರೆ ಎಲ್ಲೆಲ್ಲೂ ಇದೇ ಸಿದ್ಧಾಂತವೇ ಬೇರೆ ಬೇರೆ ರೂಪಗಳಲ್ಲಿ, ಪುರಾಣಗಳಲ್ಲಿ, ಜಾನಪದದಲ್ಲಿ, ಶಿಲ್ಪಕಲೆಯಲ್ಲಿ ಕಾಣಿಸಿಕೊಳ್ಳುತ್ತವೆ,

ದೇವಲೋಕಗಳು, ಇಂದ್ರಲೋಕ, ಹೆವೆನ್, ಹೆಲ್ ಇತ್ಯಾದಿ. ಇಸ್ಲಾಮಿನಲ್ಲೂ ಸ್ವರ್ಗ ನರಕ (ಜನ್ನತ್- ಜಹನ್ನುಮ್) ಇಲ್ಲಿಲ್ಲ, ಭೂಮಿಯ ಹೊರಗೆ ಹೋದರೆ ಸಿಕ್ಕುವಂತೆ, ಮತ್ತು **belief in holy angels** (ದೇವತೆ) ಮುಖ್ಯ ಎನ್ನುತ್ತಾರೆ.

ಯಾಕೆ ಹಾಗೆ?

(https://islam.stackexchange.com/questions/12712/where-is-paradise-and-hell)

ಲಘುವಾಗಿ ಉದಾಹರಣೆ ಕೊಡುವುದಾದರೆ-

*"ಸ್ವರ್ಗದಿಂದ ಧರೆಗಿಳಿದ ದೇವರುಗಳನ್ನು ನಾವು ಸೊಳ್ಳೆ ನೊಣಗಳಂತೆ ಬಡಿದು ಹಾಕಿದೆವು, ಅವರು ಇಲ್ಲಿಂದ ಏನೂ ಮಾಡಲಾಗದೇ ಬಾಲ ಮುದುರಿಕೊಂಡು ಓಡಿ ಹೋದರು ಎಂದೇಕೆ ಯಾವ ಪುರಾಣವೂ ಇಲ್ಲ? ಅವರೇ ನಮ್ಮನ್ನು ದೇವರೆಂದು ಕರೆದು ನಮ್ಮ ಭಕ್ತರಾದರು ಎಂದೇಕೆ ಬರೆಯಲಿಲ್ಲ?"*

**ಯಾಕೆಂದರೆ ಅದು ಸತ್ಯವಲ್ಲ**!... ಎಂದು ಆ ಸಂಶೋಧಕ ವಿಜ್ಞಾನಿ ತಿಳಿಸುತ್ತಾನೆ:-

ಅಂದ ಮೇಲೆ ನಮ್ಮ ಪುರಾಣವಾಗಲಿ, ಪ್ರಾಚೀನ ಇತಿಹಾಸವಾಗಲಿ, ಒಂದು "ಸತ್ಯವರದಿ" ಎಂದೇ ನಂಬಬೇಕಾಗುತ್ತದೆ. ಅಲ್ಲದೇ ಆಗಿನ ಕಾಲದ ಭೋಳೇ ಸ್ವಭಾವದ ಶಿಲಾಮಾನವ/ ಆದಿಮಾನವರಿಗೆ ಮುಂದಿನ ಸಹಸ್ರಾರು ವರ್ಷದ ಪೀಳಿಗೆಗಳಿಗೆ ಇಂತಾ ದೊಡ್ಡ ಸುಳ್ಳು ಕತೆ ಹೇಳಬೇಕಾದ ಅವಶ್ಯಕತೆಯೂ ಇರಲಿಲ್ಲ, ಅವರ ಕಲ್ಪನಾಶಕ್ತಿಯೂ ಆ ಮಟ್ಟಕ್ಕೆ ಬೆಳೆದಿರಲಿಲ್ಲ...ಅಲ್ಲವೇ, ಒಮ್ಮೆ ಯೋಚಿಸಿ ನೋಡಿ!

ಸರಿ, ಹಾಗಾದರೆ ಈ ಆಧಾರದ ಮೇಲೆ, ದೃಷ್ಟಿಕೋನದ ಮೇಲೆ ಮುಂದಿನ ಭಾಗಕ್ಕೆ ಬರೋಣ...

## 9.2 ಅನುನ್ನಾಕಿ ವಲಸೆ ಬಂದ ಕತೆ- ಎಲ್ಲಿಂದಲೋ ಬಂದವರು ಇಲ್ಲೇ ನೆಲೆ ನಿಂತರು!

*(ಒಂದು ಎಚ್ಚರಿಕೆ...ನೀವು ನಿಬಿರು ಅಥವಾ ಅನುನ್ನಾಕಿ ಎಂದು ಗೂಗಲ್ ಮಾಡಿದರೆ ಹತ್ತು ಹಲವಾರು ಬಗೆಯ ಕತೆಗಳು, ಎಲ್ಲವೂ ವ್ಯತ್ಯಾಸವುಳ್ಳ ಬೇರೆ ಬೇರೆ ಪುರಾಣಗಳು ಕಾಣಸಿಗುತ್ತವೆ. (Zecharia Sitchin ಬರೆದ Earth Chronicles -12th Planet ಪುಸ್ತಕ ಓದಿದರೆ...)*

*ಉದಾಹರಣೆ: ನಮ್ಮ ಸೌರವ್ಯೂಹದಲ್ಲಿ ಮೊದಲು ಭೂಮಿಯೇ ಇರಲಿಲ್ಲ, ಟಿಯಾಮೊತ್ ಎಂಬ ದೊಡ್ಡ ಗ್ರಹ ಎರಡು ಭಾಗ ಒಡೆದು, ಒಂದು ಭೂಮಿಯಾಗಿ ನೆಲೆ ನಿಂತಿತು, ನಿಬಿರು ಗ್ರಹ ತನ್ನ ಪ್ರಭಾವದಿಂದ ಎಳೆದು ತಂದ ಒಂದು ಚಿಕ್ಕ ಗ್ರಹವೇ ನಮ್ಮ ಈ ಚಂದ್ರನಾಯಿತು, ಈ ಅನುನ್ನಾಕಿ ಕುಲದವರು ಭೂಮಿಯಲ್ಲಿ 500,000 ವರ್ಷದ ಹಿಂದೆಯೇ ಇದ್ದವರು, ಅವರೇ ಜೈವಿಕ ತಂತ್ರಜ್ಞಾನ ಬಳಸಿ ಮಾನವನನ್ನೇ ಮೊದಲ ಬಾರಿಗೆ ಸೃಷ್ಟಿ ಮಾಡಿದರು, ಇತ್ಯಾದಿ... ಇತ್ಯಾದಿ....ನಾವು ಅದನ್ನೆಲ್ಲಾ ಇಲ್ಲಿ ಚರ್ಚೆಗೆ, ವಿಶ್ಲೇಷಣೆಗೆ ಒಳಪಡಿಸಿದರೆ ತಲೆ ಕೆಟ್ಟು, ಅಧ್ಯಯನ ಗೊಂದಲವಾದೀತು...ಅದಕ್ಕಾಗಿ: ಸಾಮಾನ್ಯವಾಗಿ ಜಾರಿಯಲ್ಲಿರುವ ನಿಬಿರು- ಅನುನ್ನಾಕಿ ಕತೆ ಮಾತ್ರ ಇಲ್ಲಿ ಗಮನಿಸೋಣ!)*

**ಸುಮಾರು ( 10,000 ಅಂತಲೂ ಹೇಳುವವರಿದ್ದಾರೆ) ಕ್ರಿ ಪೂ 4000 ರಲ್ಲಿ ಭೂಮಿಯಲ್ಲಿ ಮಧ್ಯಪ್ರಾಚ್ಯದಲ್ಲಿ ಈಗಿನ ಯೂಫ್ರೆಟಸ್ ಮತ್ತು ಟೈಗ್ರಿಸ್ ನದಿಯ ತೀರದಲ್ಲಿ, ಒಂದು ದಿನ ಏನಾಯಿತಂತೆ...**

**ಕಪಿಯನ್ನು ಹೋಲುವ ಮುಖಚರ್ಯೆಯ ಆದಿಮಾನವ ಆಗತಾನೆ ಹಸಿ ಮಾಂಸ ತಿನ್ನಲು ಚೂಪಾದ ಕಲ್ಲಿನ ಆಯುಧ ಹೊತ್ತು ತಾನಿದ್ದ ಗುಹೆಯ ಹೊರಗೆ ಬೆತ್ತಲೆಯಾಗಿ ಭೇಟೆಗೆ ಹೊರಟ ಸಮಯ!**




Fig. .2

One of these caves, Shanidar, is located in the north- eastern part of the semiarc of civilization. Nowadays, fierce Kurdish tribesmen seek shelter in the area's caves for themselves and their Bocks during the cold winter months. So it was, one wintry night 44,000 years ago, when a family of seven (one of whom was a baby) sought shelter in the cave of Shanidar.

Their remains-they were evidently crushed to death by a rockfall-were discovered in 1957 by a startled Ralph

ದೊಡ್ಡ ದೊಡ್ಡ ಗಗನನೌಕೆಗಳು ಆಕಾಶದಿಂದ ಬಂದಿಳಿದರೆ ಅವನಿಗೆ ಹೇಗಾಗಿರಬೇಡ!... ಬಹುಶಃ ಆ ಕಿವಿಗಡಚಿಕ್ಕುವ ಸದ್ದು, ಆ ಮಿಂಚಿನ ಹೊಳಪಿನ ದೀಪಗಳು, ಅದರ ನಡುಕ ಭೂಮಿಯನ್ನು ಅಲುಗಿಸಿದ್ದು.. ಹುಲ್ಲು, ಗಿಡಗಳು ಬಗ್ಗಿ ತೂಗುವಂತಾ ಅದರ ಅಬ್ಬರದ ಗಾಳಿ!

ಅವನ ಅಚ್ಚರಿಗೆ ಅದರಿಂದಿಳಿದ ಆಧುನಿಕ ೮ -೯ ಅಡಿ ಎತ್ತರದ ಗಡ್ಡಧಾರಿ ಹೊಸಬಗೆಯ ವಸ್ತ್ರ, ಆಭರಣ ತೊಟ್ಟ ಜೀವಿಗಳು ಕೈಯಲ್ಲಿ ಚಿತ್ರ ವಿಚಿತ್ರ ಶಸ್ತ್ರಗಳನ್ನು ಹಿಡಿದು ತನ್ನ ಕ್ಯಾಂಪಿಗೆ ನಡೆದು ಬಂದರೆ ಅವನಿಗೆ ಏನನಿಸಿರಬೇಡ...!

ಅದ್ಯಾವ ಸುಮುಹೂರ್ತದಲ್ಲಿ ಈ ಜೀವಿಗಳು ಅಲ್ಲಿಗೆ ಬಂದಿಳಿದರೋ, ಭಯಪಟ್ಟು ಹಿಂಜರಿಯುತ್ತಿದ್ದ ಈ ಆದಿಮಾನವರನ್ನು ತಮ್ಮ ಮಿತ್ರರಂತೆ ಕಂಡರೋ, ಅವರೊಂದಿಗೆ ಸಂಪರ್ಕ ಪಡೆದರೋ ಅದೇ ಆ ಭೂಮಿ ಭಾಗಕ್ಕೆ ಸುದಿನ, ಒಂದು ಹೊಸ ಯುಗದ ಆರಂಭ, ಹೊಸದೊಂದು ನಾಗರೀಕತೆಯ ಅಡಿಪಾಯ ಹಾಕಿದ ಗಳಿಗೆ!...ಭೂಮಿಯ ಕತೆ ಬದಲಾದ ತಿರುವು!

ಇದೇ ಮುಂದೆ ಜಗತ್ತಿನ ಅತಿ ಮುಖ್ಯವಾದ ಮೆಸೊಪೊಟೇಮಿಯಾ, ಬ್ಯಾಬಿಲೋನಿಯಾ ಮತ್ತು ಈಜಿಪ್ಟ್ ನಾಗರೀಕತೆಗಳಿಗೆ ಬಿತ್ತಿದ ಬೀಜವಾಯಿತು. ಇದಕ್ಕೆ ಒಟ್ಟಾರೆ- ಮೂಲವಾಗಿ- ಸುಮೇರಿಯನ್ ನಾಗರೀಕತೆ ಎಂಬ ಪ್ರಾಚೀನ ಹೆಸರು ಬಳಸುತ್ತಾರೆ

ಮೊದಮೊದಲು ಭಾಷೆ ಬರದ ಈ ಆದಿಮಾನವರಿಗೆ ಮೊದಲು ಟೆಲಿಪತಿಯಲ್ಲಿ ತಾವು ಯಾರೆಂದು ಪರಿಚಯ ಮಾಡಿಕೊಟ್ಟಿರಲೇ ಬೇಕು, ಬೇರೆ ಯಾವ ವಿಧಾನವೂ ಇದ್ದಿರಲಿಕ್ಕೆ ಸಾಧ್ಯವೆ ಇಲ್ಲ.

ಆನಂತರ ಮಾನವನಿಗೆ ಮಾತಾಡಲು ಸೂಕ್ತವಾದ ಭಾಷೆ, ಲಿಪಿ ಎಲ್ಲವನ್ನು ನಿಧಾನವಾಗಿ ಕಲಿಸಿರಬೇಕು..

ಹೇಗೋ, ಒಟ್ಟಿನಲ್ಲಿ ಕಂಡು ಕೇಳಿಬರುವುದಿಷ್ಟೇ!

- ಇವರ ಕುಲದ ಹೆಸರು ಅನುನ್ನಾಕಿ...( 'ಆಗಸದಿಂದ ಭೂಮಿಗೆ ಬಂದವರು' ಇದರರ್ಥ ಎನ್ನುತ್ತೆ ಸುಮೇರಿಯನ್ ಚರಿತ್ರೆ)
- ನಿಬಿರು ಎಂಬುದು ಇವರು ವಾಸಿಸುವ ದೂರದ ಗ್ರಹ, ನಿಬಿರು ಅಂದರೆ ಪ್ರಾಚೀನ ಅಕ್ಕೇಡಿಯನ್ ಭಾಷೆಯಲ್ಲಿ ಸಂಧಿ-ಸ್ಥಳ, ಅಥವಾ ಕ್ರಾಸಿಂಗ್ ಎಂದು ...
- ಅಲ್ಲಿ ಇವರು ಬಹಳ ಆಧುನಿಕ ಜೀವನಶೈಲಿಯಲ್ಲಿ ಹಲವು ಅಭಿವೃದ್ಧಿಯ ಸೀಮೆಗಳನ್ನು ದಾಟಿ ಸುಖಜೀವನ ನಡೆಸುತ್ತಿದ್ದರಂತೆ.
- ಸೂರ್ಯನಿಂದ ಬಹಳ ದೂರ ಇರುವವರು, 10,000 ವರುಷಕ್ಕೊಮ್ಮೆ ಮಾತ್ರ ಸೂರ್ಯನ ಬಳಿಗೆ ಬಂದಾಗ ನಮ್ಮಂತಾ ನೆರೆ ಗ್ರಹಗಳ ದರ್ಶನವಂತೆ...
- ಇವರು ಅಂತರಿಕ್ಷದಲ್ಲಿ ಹೀಗೆ ಪ್ರಯಾಣ ಮಾಡುತ್ತಾ ಮಾಡುತ್ತಾ ಭೂಮಿಗೇ ಬರಲು ಬಲವಾದ ಕಾರಣವಿದೆಯಂತೆ.
- ಅವರ ಗ್ರಹಮಂಡಲದಲ್ಲಿ ಆಗ ವಾತಾವರಣ ಕಲುಷಿತವಾಗಿ ಆರೋಗ್ಯ ಹಾನಿಯಾಗಿ ಜೀವನ ದುಸ್ತರವಾಯಿತಂತೆ. **ಅವರ ಖಗೋಳ ಶಾಸ್ತ್ರಜ್ಞರ ಪ್ರಕಾರ- ಬಂಗಾರದಿಂದ ಮಾತ್ರ ಅದನ್ನು ಶುದ್ಧೀಕರಿಸಲು ಸಾಧ್ಯವಂತೆ, ಬಂಗಾರದ ದ್ರಾವಣ, ಅದರ ಪ್ರತಿಫಲನ ಮಾಡುವ ಗೋಡೆಗಳಿಂದ ಆರೋಗ್ಯಕರ ವಾತಾವರಣ ಬರುವುದೆಂದು** ಅವರು ನಿರ್ಧರಿಸಿ ತಮ್ಮಲ್ಲಿ ಖಾಲಿಯಾಗಿದ್ದ ಚಿನ್ನದ ಸ್ಟಾಕ್ ಹುಡುಕಿಕೊಂಡು ಸೌರಮಂಡಲವನ್ನು ಸುತ್ತತೊಡಗಿದರಂತೆ
- ***( ಹಾಸ್ಯಕ್ಕಾಗಿ: ನಾವು ಹಾಲಿವುಡ್ಡಿನ ವೆಸ್ಟರ್ನ್ ಚಿತ್ರದಲ್ಲಿ ಮಾತ್ರ ಗೋಲ್ಡ್ ಹಂಟ್ ( ಚಿನ್ನದ ಭೇಟೆ) ಇತ್ತೆಂದು ಕೊಂಡೆವು, ಈ ನಿಬಿರುಗೂ ಬೇಕಾಯಿತೆ?...ನಮ್ಮ ಹೆಂಗಸರು ಚಿನ್ನವನ್ನು ಮೈತುಂಬಾ ಬಳಸುತ್ತಾರಲ್ಲಾ...ಅವರ ಆರೋಗ್ಯವೂ ಚೆನ್ನಾಗಿರುವುದೋ ಏನೋ, ಅವರೇ ಹೇಳಬೇಕು...ಅಂದಹಾಗೆ ಗೋಲ್ಡ್ ಡಸ್ಟ್ ಇರುವ ಆಯುರ್ವೇದದ ಔಷಧಿಗಳು ಕೂಡಾ ಜೀವ ಚೈತನ್ಯವನ್ನು ತುಂಬುತ್ತೆ ಅನ್ನುವುದಿಲ್ಲವೆ? ಸತ್ಯ ಇಲ್ಲೆಲ್ಲೋ ಖಂಡಿತಾ ಇದೆ!)***

- 'ನಾಸಾ' ದವರು ಕಟ್ಟಿದ ಉಪಗ್ರಹಗಳಲ್ಲಿ ಚಿನ್ನ ಉಪಯೋಗಿಸುತ್ತಾರೆ. ಇಲ್ಲಿದೆ ಮಾಹಿತಿ:

  https://curiosity.com/topics/nasa-uses-gold-on-its-spacecraft-curiosity/

ಭೂಮಿಯಲ್ಲಿ ಅತಿ ಹೆಚ್ಚಿನ ಚಿನ್ನದ ಸಂಗ್ರಹ ಇರುವುದನ್ನು ಅವರು ಬಾಹ್ಯಾಕಾಶದಿಂದಲೇ ಪತ್ತೆ ಹೆಚ್ಚಿದ್ದರಂತೆ. ಅದೂ ಇದ್ದಿದ್ದು ಇನ್ನೆಲ್ಲಿ?- ದಕ್ಷಿಣ ಆಫ್ರಿಕಾ ಬಳಿ....ಹಾಗಾಗಿ ಇಳಿಯಲು ಪ್ರಶಸ್ತವಾದ ಈಗಿನ ಇರಾನ್-ಇರಾಕ್-ಲೆಬನಾನ್-ಸಿರಿಯಾ- ಸೌದಿ ಅರೇಬಿಯಾ ( ಮೆಸೊಪೊಟೇಮಿಯಾ) ಮಧ್ಯದಲ್ಲಿ ಬಿಡಾರ ಹಾಕಲು ಬಂದಿದ್ದರಂತೆ. ಕಾಲಕ್ರಮೇಣ ಅವರ ವಿಶೇಷ ದೈಹಿಕ + ಮಾನಸಿಕ ಶಕ್ತಿಗಳಿಂದ ಇಲ್ಲಿನ ಹವೆಗೆ ಒಗ್ಗಿಬಿಟ್ಟರಂತೆ. (ಈಗಲೂ ಹೆಚ್ಚಿನ ಚಿನ್ನ, ವಜ್ರ ಮುಂತಾದ್ದು ಸಿಗುವುದು ಖನಿಜಗಳ ಸ್ವರ್ಗದಂತಿರುವ ಆಫ್ರಿಕಾದಲ್ಲೇ ಎಂಬುದು ನಮಗೆ ತಿಳಿದಿದೆ)



- ಆಗಿನ ಸುಮೇರಿಯನ್ ನಗರದ ಚಿತ್ರ, ಪಿರಮಿಡ್ ಮಾದರಿ ಕಟ್ಟಡ ಗಮನಿಸಿ!




- ಅನುನ್ನಾಕಿಗಳದು ಎನ್ನಲಾದ ಮೊಟ್ಟೆಯಂತಾ ದೊಡ್ಡ ತಲೆಯ ಅಸ್ತಿಪಂಜರಗಳು ಆಫ್ರಿಕಾ, ದ.ಅಮೇರಿಕಾದಲ್ಲಿ ಸಿಗುತ್ತವೆ. ಅಲ್ಲಿನ ಟ್ರೈಬಲ್ಸ್ ಜನರಿಗೂ ಹಾಗೇ ಲಕ್ಷಣಗಳಿವೆ.

- **ಅನುನ್ನಾಕಿ ಇಲ್ಲಿ ಆಧುನಿಕ ನಗರಗಳನ್ನು ನಿರ್ಮಿಸಿದರು. ತಮ್ಮ ಗ್ರಹ ಮಂಡಲಕ್ಕೆ ಆಗಸದಿಂದ ಕಾಣುವಂತೆ ದಿಕ್ಸೂಚಿಯಾಗುವ ಆಯಕಟ್ಟಿನ ಸ್ಥಳಗಳಲ್ಲಿ ಸೂಕ್ತವಾಗಿ ಪಿರಮಿಡ್ಡುಗಳನ್ನು ಕಟ್ಟಿದರು.( ಪಿರಮಿಡ್ಡುಗಳಿಗೆ ಇನ್ನೂ ಹೆಚ್ಚಿನ ಮಹತ್ವವಿದೆ, ಆದರೆ ಇಲ್ಲಿ ಇಷ್ಟು ಸಾಕು!)**
- ತಮ್ಮ ಕೆಲಸ ಮಾಡಿಸಲು ಒಂದು ಬಗೆಯ ನೌಕರರನ್ನು ಅಲ್ಲಿಗೆ ನಿಬಿರುದಿಂದಲೇ ಕರೆತಂದಿದ್ದರಂತೆ. ಅವರ ಕುಲದ ಹೆಸರೇ **ಇಗಿಗಿ**. ಇವರನ್ನು ಸುಮೇರಿಯನ್ನರು- ಲೋಯರ್ ಗಾಡ್ಸ್ **(ಚಿಕ್ಕ ದೇವರುಗಳು)** ಎನ್ನುತ್ತಾರೆ.
- ಸಿಕ್ಕಾಪಟ್ಟೆ ಚಿನ್ನದ ಗಣಿ ಕೆಲಸ ಮಾಡುತ್ತಿದ್ದ ಶ್ರಮ ಜೀವಿಗಳಾದ 'ಇಗಿಗಿ'ಗಳು ಕೊನೆಗೆ ಬೇಸತ್ತು ತಮ್ಮ ಒಡೆಯರ ಮೇಲೆ ದಂಗೆಯೆದ್ದರಂತೆ- "ಇದು ಅಮಾನುಷ, ಕ್ರೂರ ನೌಕರಿ" ಎಂದು. ಆಗ ನಮ್ಮ ಆದಿಮಾನವರೊಂದಿಗೆ ಸೈನ್ಯ ಸೇರಿಸಿ ಅನುನ್ನಾಕಿ ಮಾಲೀಕರು ಅವರನ್ನು ಬಗ್ಗು ಬಡಿದು ಕೊಂದರಂತೆ..ಅವರಲ್ಲಿ ಮಿಕ್ಕವರು ಓಡಿಹೋದರಂತೆ.
- ಆಗ ಅನುನ್ನಾಕಿಗಳಿಗೆ ಮಿಕ್ಕ ಚಿನ್ನದ ಗಣಿ ಕೆಲಸ ಮಾಡಿಸಲು ಗುಲಾಮರಿಲ್ಲದೇ ಹೋಯಿತು. ಆಗ ಅವರು ತಮ್ಮ ವಿಶೇಷ ಜೈವಿಕ ಪ್ರಯೋಗ ಮಾಡಿ ಆದಿ ಮಾನವನ (ಹೋಮೋ ಎರಕ್ಟಸ್) DNA ಗೆ ತಮ್ಮ DNA ಬೆರೆಸಿ **ಮಿಶ್ರತಳಿ ಮನುಷ್ಯರನ್ನು ತಯಾರಿಸಿದರಂತೆ.**
- **ಅವರೇ ನಮ್ಮ ಈಗಿನ ಕುಲ - "ಹೋಮೋ ಸೇಪಿಯನ್ಸ್:(Homo Sapiens)". ಹೀಗೆ "ವಾನರ"ರಿಂದ 'ನರ' ರಾದೆವು! (ಈ ಪುರಾಣದ ಪ್ರಕಾರ)**



- ( ಈ ಮಧ್ಯದಲ್ಲಿರುವ ಜೀವ ವೃಕ್ಷವೇ ಮಾನವ ಸೃಷ್ಟಿಯ ಪ್ರಯೋಗಾಲಯವೆಂದು ಹಲವೆಡೆ ಮಾರ್ಮಿಕವಾಗಿ ಚಿತ್ರಿತವಾಗಿದೆ... ಸುತ್ತಲೂ ನಿಂತವರು ಅನುನ್ನಾಕಿ ಒಡೆಯರು..)
- ಹೊಸದಾಗಿ ತಯಾರಾದ ಮಾನವನು ಒಳ್ಳೆಯ ಶ್ರದ್ಧೆಯುಳ್ಳ, ಕೃತಜ್ಞತೆಯುಳ್ಳ ನೌಕರನಾದ. ಸಹಸ್ರಾರು ಮಾನವರು ಬೇಕಿದ್ದರಿಂದ ಅನುನ್ನಾಕಿಗಳು ಮೊದಲು ಸಂತಾನಶಕ್ತಿಯಿಲ್ಲದೇ ಜನಿಸಿದ್ದ ಸ್ತ್ರೀ ಪುರುಷರಿಗೆ ಲೈಂಗಿಕ ಸಂತಾನೋತ್ಪತ್ತಿ ಶಕ್ತಿಯನ್ನೂ ಒದಗಿಸಿಕೊಟ್ಟರು, ತಮ್ಮ ಮುಂದಿನ ಪ್ರಯೋಗದಲ್ಲಿ!!..

- ವ್ಯವಸಾಯ, ನೀರಾವರಿ, ತೋಟಗಾರಿಕೆ, ಬೇಯಿಸಿದ ಆಹಾರ, ಚಕ್ರದ ವಾಹನಗಳು, ಲೋಹದ ಕೆಲಸ ಎಲ್ಲವನ್ನೂ ಮಾನವನಿಗೆ ಕಲಿಸಿಕೊಟ್ಟರು ಅನುನ್ನಾಕಿ ಗುರುಗಳು!




- ಹಾಗಾಗಿ, ಮಾನವರ ಸಂಖ್ಯೆ ಸಹಸ್ರದಲ್ಲಿ  ಹೆಚ್ಚುತ್ತಾ ಹೋಯಿತು... ಆಗೊಮ್ಮೆ ಮಾಲೀಕ ಅನುನ್ನಾಕಿಗಳಿಗೆ ಚಿಕ್ಕ ಭಯ ಶುರುವಾಯಿತು...'ಈ ಮಾನವರು ಸ್ವಲ್ಪ ಮಟ್ಟಿಗೆ ಬುದ್ಧಿವಂತರಾದರೂ ಕೌಶಲರಾದರೂ ತಮಗಿಂತಾ ಪ್ರಬಲರಲ್ಲ, ನಾವು ಹಾಗೇನೂ ನಿರ್ಮಿಸಿಲ್ಲವಲ್ಲ' ಎಂದು ಅರಿವಿದ್ದರೂ, ಇವರ ಸಂಖ್ಯೆ ಹೆಚ್ಚು ಇಲ್ಲೇ ಕೇಂದ್ರೀಕೃತವಾಗಿರಬಾರದು ಎಂದು ಒಬ್ಬ ಅನುನ್ನಾಕಿ ನಾಯಕರೊಡನೆ ಸಹಸ್ರಾರು ಮಾನವರನ್ನು ಆಫ್ರಿಕಾದಿಂದ ಪೂರ್ವ ಮತ್ತು ಉತ್ತರ ದಿಕ್ಕುಗಳಿಗೆ ಕಳಿಸಿಕೊಟ್ಟರು. ಮೊದಲು ಈಜಿಪ್ಟಿಗೂ ಹೋದವರು, ಅಲ್ಲಿ ಮತ್ತೆ ಮಾನವನೊಂದಿಗೆ ಬೆರೆತು ಮಿಶ್ರತಳಿ ಆಗಿ ಅಲ್ಲಿನ ಫಾರೋಸ್ ವಂಶಸ್ತರಾಗಿ ಅಲ್ಲಿನ ದೊರೆಗಳಾದರಂತೆ, ಮಿಕ್ಕವರು ಸಿಂಧೂ ನದಿಯವರೆಗೂ ಬಂದು ನೆಲೆಸಿ ಅಲ್ಲಿ ಮತ್ತೆ ಮಾನವನೊಂದಿಗೆ ಅನುನ್ನಾಕಿ ಮಿಶ್ರತಳಿ ಸಂತಾನವಾಗಿ ಅಲ್ಲೊಂದು ನಾಗರೀಕತೆ ಜನಿಸಿತಂತೆ. **ಹರಪ್ಪಾ- ಮೊಹೆಂಜೆದಾರೋ**!...
- ಬರುಬರುತ್ತಾ ಹೀಗೆ ಹೆಚ್ಚಿದ ನಾಗರೀಕತೆಗಳಲ್ಲಿ ಆಯಾ ದೇಶ-ಭಾಷೆಗಳೂ, ರೀತಿ ರಿವಾಜುಗಳೂ, ಹವಾಮಾನಕ್ಕೆ ತಕ್ಕಂತೆ ಮೈ ಚರ್ಮ, ವ್ಯಕ್ತಿತ್ವ ಎಲ್ಲವೂ ವಿಕಾಸವಾಗುತ್ತಾ ಬದಲಾಗುತ್ತಾ ಹೋಯಿತಂತೆ. ಅನುನ್ನಾಕಿಯ ಲೆಕ್ಕಾಚಾರಕ್ಕೆ ಬಹುಶಃ ವಿರುದ್ಧವಾಗಿ ನಾಗರೀಕತೆಗಳೂ, ಜನಸಂಖ್ಯೆಯೂ ಬೆಳೆಯಿತು.




- ಆದರೂ ಅನುನ್ನಾಕಿ ಎಲ್ಲರ ಮೇಲೆ ನಿಯಂತ್ರಣ ಇಟ್ಟುಕೊಂಡು ತಾವೇ ದೇವರುಗಳೆಂದು ಬಿಂಬಿಸಿಕೊಂಡು ಆಗಿನ ಜನಮಾನಸದಲ್ಲಿ, ಅವರ ಚರಿತ್ರೆ, ಶಿಲ್ಪಕಲೆ, ಚಿತ್ತಾರಗಳಲ್ಲಿ, ಜಾನಪದದಲ್ಲಿ ಗಟ್ಟಿಯಾಗಿ ನೆಲೆಸಿಬಿಟ್ಟರು.
- ಹೀಗೆ ಇವರು ನೂರಾರು ವರ್ಷಕಾಲ ನಿಬಿರು ಗ್ರಹಕ್ಕೆ ಇಲ್ಲಿಂದ ಚಿನ್ನವನ್ನು ಸಾಗಿಸುತ್ತಲೇ ಇದ್ದರು, ನಮ್ಮ ಮಾನವರೇ ಅವರಿಗೆ ಮೆಸೊಪೊಟೇಮಿಯಾದಲ್ಲಿ (ಆಗಿನ ಸುಮೇರಿಯಾದಲ್ಲಿ) ಗುಲಾಮರಾಗಿದ್ದು ಬಿಟ್ಟರಂತೆ.
- **ಒಮ್ಮೆ ಇವರ ಮೇಲೆ ಇವರನ್ನು ಸದಾ ಕಾಡುತ್ತಿದ್ದ ವೃಷಭ ರಾಶಿಯವರಾದ ಪ್ಲೆಯ್ಡಿಯನ್ನರ ಕಣ್ಣು ಬಿತ್ತಂತೆ**.




Taurus Constellation – ವೃಷಭ ರಾಶಿ

**ಟೋರಸ್ (Taurus) ಅಂದರೆ ವೃಷಭ ರಾಶಿಯ ಒಂದು ಗ್ರಹ ನಿವಾಸಿಗಳಾದ ಪ್ಲೆಯ್ಡಿಯನ್ಸ್ ಸಹಾ ಆಗ ಬಹಳ ಮುಂದುವರೆದ ಕುಲದವರೇ**. ಅವರೂ ಅನ್ಯಗ್ರಹಗಳನ್ನು ಪತ್ತೆ ಹಚ್ಚಿ ನೆಲೆಸಲು ಹೊರಟವರು. ಹಳದಿ ಕೂದಲಿನ, ನೀಲಿಕಣ್ಣಿನ ಎತ್ತರದ ನಾರ್ಡಿಕ್ (ಯೂರೋಪಿಯನ್ ಸಂತತಿ- ನಾರ್ವೆ ಸ್ವೀಡನ್ ಕಡೆಯವರಂತೆ) ಜನರಂತೆ ಕಾಣುವ ಇವರು ಭೂಮಿಗೆ ಬಂದಿಳಿದು ಮೊದಲು ಯೂರೋಪಿನಲ್ಲಿ ತಮ್ಮ ವಸಾಹತು ಮಾಡಿಕೊಂಡರು.

ಇವರನ್ನು ಅನುನ್ನಾಕಿಗಳು ಆಗ "**ಹೀಬ್ರ್ಯೂ" (hebrew) ಎಂದು ಕರೆದರು. (ಅದೇ ಈಗಿನ ಇಸ್ರೇಲಿನ ಭಾಷೆ!...ಯೆಹೂದಿಗಳದು!)**




## 9.3 ಅನುನ್ನಾಕಿ-ಪ್ಲೆಯ್ಡಿಯನ್ ಯುದ್ಧಕ್ಕೆ ಭೂಮಿಯೇ ರಣರಂಗ!

- ಭೂಮಿಗೆ ಬಂದ ಪ್ಲೆಯ್ಡಿಯನ್ನರು ಅನುನ್ನಾಕಿಗಳ ಮೇಲೆ ಯುದ್ಧ ಸಾರಿದರು. ಆದರೆ ಸಂಖ್ಯಾಬಲದಲ್ಲಿ ಮಾನವ ಗುಲಾಮರೂ ಸೇರಿ ಅಧಿಕವಿದ್ದ ಅನುನ್ನಾಕಿಗಳೇ ಪ್ಲೆಯ್ಡಿಯನ್ನರನ್ನು ಗೆದ್ದು, ಕೊಂದು ಯುರೋಪಿಗೇ ಹಿಮ್ಮೆಟ್ಟಿಸಿದರು. ನೋಡಿ, ಎಲ್ಲಿಂದಲೋ ಬಂದವರಿಗೆ ಭೂಮಿ ಮನೆಯೊಂದೇ ಅಲ್ಲ, ರಣರಂಗವೂ ಆಯಿತು.
- ***ಇದೆಲ್ಲಾ ಇನ್ನು ನಿಮಗೆ ಬೈಬಲ್ಲಿನ OLD TESTAMENT ಗ್ರಂಥದಲ್ಲಿ ಧಾರಾಳವಾಗಿ ಸವಿವರವಾಗಿ ಸಿಗುತ್ತದೆ.***
- ಆ ಬೈಬಲ್ಲಿನ "**ಆದಿ ಪುರಾಣ**"ವೇ ಈ ಮುಂದಿನ ಕತೆ...(*ಓದಿಲ್ಲದಿರುವವರು ಮಾಹಿತಿಗಾಗಿ ಒಮ್ಮೆ ಬೈಬಲ್ಲಿನ ಈ ಭಾಗ ಓದಿ ನೋಡಿ...ಬಹಳ ಆಸಕ್ತಿಕರವಾದ ದೇವರು- ಮಾನವರ ಪವಾಡದ ಕತೆಗಳು*)

- ನಾವು ಗೆದ್ದೆವೆಂದು ಬೀಗಿದ ಅನುನ್ನಾಕಿ+ ಮಾನವ ಸೈನ್ಯ - ಕೆಲವು ಬುಲ್ ಫೈಟಿಂಗ್ ಚಿತ್ರಗಳಲ್ಲಿ ಟೋರಸ್ - ವೃಷಭ ರಾಶಿಯವರನ್ನು ಸೋಲಿಸಿದಕ್ಕಾಗಿ ಗೂಳಿಯನ್ನು ಚುಚ್ಚಿ ಕೊಲ್ಲುವ ಚಿತ್ರಗಳನ್ನೂ ಬರೆದು, ಬಳಿಕ ಅದರ ಕ್ರೀಡೆಗಳನ್ನೂ ಆಡಿದರು. (ಈಗಲೂ ಸ್ಪೇನ್ ದೇಶದಲ್ಲಿ ಈ ಗೂಳಿ ಕೊಲ್ಲುವ ರಕ್ತ ಕ್ರೀಡೆಯಿದೆ). ಹಲವೆಡೆ ಬುಲ್ ರನ್ ಅಂದರೆ ಗೂಳಿಯನ್ನು ಹಚಾ ಹಚಾ ಎಂದು ಓಡಿಸಿಕೊಂಡು ಹೋಗುವುದು, ಅದನ್ನು ಮಣಿಸಿ ಗೆಲ್ಲುವುದು ಇತ್ಯಾದಿ ಜನಪ್ರಿಯವಾಗುತ್ತಾ ಬಂತು ( ತಮಿಳರ ಜಲ್ಲಿಕಟ್ಟು ಗೆ ಸಹಾ ಇದೇ ಪ್ರಾಚೀನ ಕ್ರೀಡೆಯೇ ಸಂಸ್ಕೃತಿಯಾಯಿತೆ? ಯೋಚಿಸಿ!)

- ಆದರೆ ಪ್ಲೆಯ್ಡಿಯನ್ನರು ಮತ್ತೆ ನೂತನ ಆಯುಧ ಶಸ್ತ್ರಗಳನ್ನು ಬಳಸಿ ಅನುನ್ನಾಕಿ ಮೇಲೆ ಯುದ್ಧಕ್ಕೆ ಬಂದರು. ಎರಡನೇ ಬಾರಿ!. Weapons of Mass Destruction ಬಳಸಿದರಂತೆ,... ಅಂದರೆ ಅಣ್ವಸ್ತ್ರಗಳಿರಬೇಕು! ವಿಪರೀತ ಸಾವು ನೋವುಗಳು, ವಿನಾಶಗಳಾದವು. ಇಬ್ಬರಲ್ಲಿ ಯಾರು ಅದನ್ನು ಬಳಸಿದರು ಎಂದು ಸರಿಯಾಗಿ ಗೊತ್ತಾಗುತ್ತಿಲ್ಲ.!




**ಮೇಲಿನ ಈ ಶಿಲ್ಪದಲ್ಲಿ ಸ್ಪೇಸ್ ಸೂಟ್ ಧರಿಸಿದ ಗಗನಯಾತ್ರಿ/ ಪೈಲೆಟ್ ಎಲ್ಲಿಂದ ಬಂದ? ಹಾಗೂ ಇದ್ದಿರಲೇಬೇಕು ಅಲ್ಲವೆ?**




**<< ಅಣು ಬಾಂಬ್ ಹೊಡೆತದ ಕಪ್ಪು ಕುಳಿಗಳೆ? ಹಾಗೆನ್ನುತ್ತಾರೆ**

ಬಹಳ ದೊಡ್ಡ ಪ್ರಮಾಣದಲ್ಲಿ ಪ್ರವಾಹಗಳು ಉಕ್ಕಿ ಹರಿದವು. ಆಗ ಸುಮೇರಿಯನ್ ಚರಿತ್ರೆ ಹೇಳುತ್ತದೆ:

*"ಪ್ರವಾಹ ತೀವ್ರವಾದಾಗ, ಮತ್ತೊಮ್ಮೆ ಗಗನದಿಂದ ರಾಜರ ಸೈನ್ಯ ಇಲ್ಲಿಗೆ ಬರಬೇಕಾಯಿತು, ಎರಡನೇ ಸಲ"*

ಅಣ್ವಸ್ತ್ರ ಉಪಯೋಗಿಸಿದ್ದರ ಫಲವೊ ಏನೋ, ಅಲ್ಲಿರುವ Dead Sea (ಡೆಡ್ ಸೀ) ನಲ್ಲಿ ವಿಪರೀತ ಅಣು ವಿಕಿರಣ ರೇಡಿಯೇಷನ್ ಇದೆಯಂತೆ. ಯಾವ ಜೀವಿಯೂ ಅಲ್ಲಿ ಉಳಿಯಲು ಸಾಧ್ಯವಿಲ್ಲದಷ್ಟು ಉಪ್ಪಿದೆಯಂತೆ. ಹಾಗಾಗಿ ಆ ಹೆಸರು!

**(ಅದೇಕೋ ನೋಡಿ, ಈಗಲೂ ಮಧ್ಯಪ್ರಾಚ್ಯದಲ್ಲಿ ಅಭಿವೃದ್ಧಿ ಮತ್ತು ಯುದ್ಧ ಎರಡೂ ಸಮಾನಾಂತರವಾಗಿ ಸಾಗಿದೆ. ಇಂದಿಗೂ ಮಧ್ಯಪ್ರಾಚ್ಯದ ಇರಾನ್-ಇರಾಕ್, ಲೆಬನಾನ್-ಸಿರಿಯಾ- ಇಸ್ರೇಲ್ ಎಲ್ಲಿಯೂ ಶಾಂತಿಯಿಲ್ಲ, ಅದೇ ಯುದ್ಧದ ಬೀಜ ಶಾಶ್ವತವಾಗಿ ನೆಟ್ಟುಬಿಟ್ಟಿತೋ ಹೇಗೆ**?)

- ಯುದ್ಧಾನಂತರ ಪ್ಲಯ್ಡಿಯನ್ನರು ಯೂರೋಪಿನಲ್ಲಿ ಭದ್ರವಾಗಿ ನೆಲೆಸಿದರಂತೆ. ಅವರೇ ಈಗಿನ ಬಿಳಿ ಮನುಷ್ಯರ ಪೂರ್ವಜರಂತೆ. ಬಹುಶಃ ಅದೇ ರೀತಿ ಕಾಣುತ್ತಾರೆ ಬಹುತೇಕ ಯೂರೋಪಿಯನ್ನರು!
- ಆದರೆ ಭೂಮಿಗೆ ಸದ್ಯದಲ್ಲೇ ಬಹು ದೊಡ್ಡ ಗಂಡಾಂತರ ಬರಲಿದೆಯೆಂಬುದನ್ನು ಅನುನ್ನಾಕಿಗಳೂ ಮಾನವ ಗುಲಾಮರಿಗೆ ತಿಳಿಸಲೇ ಇಲ್ಲವಂತೆ. ಅದೇ ತಮ್ಮ ನಿಬಿರು ಗ್ರಹ ಎರಡಾವರ್ತನೆಯಲ್ಲಿ ಭೂಮಿಯ ಹತ್ತಿರ/ ಸೂರ್ಯನ ಬಳಿಗೆ ಬಂದಾಗ ಆಗುವ ಹವಾಮಾನದ ವೈಪರೀತ್ಯಗಳು, ತಾಪಮಾನದ ಏರಿಕೆ, ದೊಡ್ಡ ಪ್ರಮಾಣದ ಸಾವು ನೋವು!
- ಆದರೆ ಒಬ್ಬ **NOAH- ನೋಅಹ್** ಎಂಬವನಿಗೆ ಎನ್-ಕೀ/ ಯಾಹ್ ವೆಹ್ ಎಂಬ ಅನುನ್ನಾಕಿ ದೇವರು-

" *ಆರ್ಕ್ ನೌಕೆ ಕಟ್ಟಿಕೊಂಡು ಭೂಮಿಯ ಮೇಲಿನ ಮನುಷ್ಯರು ಮತ್ತು ಪ್ರಾಣಿಗಳನ್ನು ಕಾಪಾಡು, ಇನ್ನು ಇಲ್ಲಿ ದೊಡ್ಡ ಪ್ರವಾಹ ಬಂದು ವಿನಾಶವಾಗುತ್ತದೆ*" ಎಂದರಂತೆ. **ಆತ ಹಾಗೆ ಮಾಡಿದ ಬೈಬಲ್ ಕತೆಯೇ Noah's ark ಕತೆ.**



**ಸುಮೇರಿಯನ್ನರು ಹೇಳಿದ ಪ್ರಕಾರದ ನೋಅಹ್ಸ್ ಆರ್ಕ್!**



- **ಬೈಬಲ್-**

**GENESIS ಪ್ರಕಾರದ**

**Noah's Ark**

(https://en.wikipedia.org/wiki/Noah%27s_Ark)

- ನಿಬಿರು ಸನ್ನಿಹಿತವಾದ್ದರಿಂದಲೋ ಏನೋ, ಅನತಿ ಸಮಯದಲ್ಲೇ ಉತ್ತರ ಧ್ರುವದ ಹಿಮ ಗೆಡ್ಡೆಗಳು ಕರಗಿ ಅತಿ ದೊಡ್ಡ ಪ್ರವಾಹ ಬಂದು ಪ್ರಳಯವಾಯಿತಂತೆ, **ಆಗ ಹತ್ತಿರವಿದ್ದ ನಿಬಿರು ಗ್ರಹಕ್ಕೆ ವಾಪಸ್ ಹಾರಿ ತಮ್ಮನ್ನು ರಕ್ಷಿಸಿಕೊಂಡರಂತೆ ಇಲ್ಲಿದ್ದ ಅನುನ್ನಾಕಿ ದೇವ-ಅರಸರು ಎಲ್ಲಾ ತಮ್ಮವರ ಸಮೇತ...!**
- ಹಾಗೇ ಆ ಸಮಯದಲ್ಲಿ ಪ್ಲೆಯ್ಡಿಯನ್ನರೂ ತಮ್ಮ ಗ್ರಹಗಳಿಗೆ ವಾಪಸ್ ಹೊದರೆಂದೂ, ಕೆಲವರು ಮಾತ್ರ ನಮ್ಮ ಸಾಗರದಡಿ ಸಾಮ್ರಾಜ್ಯ ಕಟ್ಟಿಕೊಂಡಿದ್ದಾರೆಂದೂ ಹೇಳುತ್ತಾರೆ. **ಅದರ ನಂತರ ಅನುನ್ನಾಕಿ ಮಾತ್ರ ಇಲ್ಲಿಗೆ ವಾಪಸ್ ಬರಲೇ ಇಲ್ಲ.**
- **ಇದಕ್ಕೆಲ್ಲಾ ಯಾವುದೇ ವೈಜ್ಞಾನಿಕ ಸಾಕ್ಷಿ ಪುರಾವೆಯಿಲ್ಲವಾದ್ದರಿಂದ ನನ್ನ ಬರಹ ಮುಗಿಸುತ್ತೇನೆ**. ನೀವು ಬೈಬಲ್ ಮತ್ತು ಕುರಾನಿನ ಕತೆಗಳನ್ನೂ ಓದಿ ಹೆಚ್ಚು ಮಾಹಿತಿ ಪಡೆಯಬಹುದು. **ನಂಬಿಕೆ ಅವರವರಿಚ್ಚೆ**!!
- ಹೀಗೆದೆಯಂತೆ ನೋಡಿ- ಆಗಿನ ಭೂಮಿ ಮತ್ತು ಸೃಷ್ಟಿ ಮತ್ತು ವಿನಾಶದ ವೃತ್ತಾಂತ!
- ಪ್ಲೆಯ್ಡಿಯನ್ನರು ಮಾತ್ರ ಆಗಾಗ ಭೂಮಿಗೆ ಭೇಟಿ ಕೊಟ್ಟು ಇನ್ನೂ ಹೆಚ್ಚು ಮುಂದುವರೆದ ಜನಾಂಗವಾಗಿ ಈಗ ಶಾಂತಿಪ್ರಿಯರಾಗಿ ಅಂತಾ ಉಪಕಾರಿ, ಜನಹಿತದ ಸಂದೇಶಗಳನ್ನು ಮಾತ್ರ ನಮಗಾಗಿ ತರುತ್ತಾರಂತೆ. ಅದೆಲ್ಲಾ ನನ್ನ ಮಿಕ್ಕ ಅಧ್ಯಾಯಗಳಲ್ಲಿ ಹೇಳಿದ್ದೇನೆ.
- ಆಮೇಲೆ ನಾವು ನಾವೇ, ಮಾನವರಾಗಿ (ಹೋಮೋ ಸೇಪಿಯನ್ಸ್ ಆಗಿ) ಭೂಮಿಯಲ್ಲಿ ಹೀಗೆ ಬಾಳುತ್ತಲೇ ಬಂದಿದ್ದೇವೆ. **ಆದರೆ ಪ್ಲೆಯ್ಡಿಯನ್ನರ ಪ್ರಕಾರ ನಾವು ಈಗಿರುವುದಕ್ಕಿಂತಾ ಹೆಚ್ಚಾಗಿ ಪ್ರಗತಿಯಾಗಲೇ ಇಲ್ಲ, ಅದರಲ್ಲಿಯೂ ಮಾನಸಿಕ ಶಕ್ತಿ ಮತು ಆಧ್ಯಾತ್ಮಿಕ ಶಕ್ತಿಗಳನ್ನು ಕ್ರೋಢೀಕರಿಸಿ ಮೇಲ್ಮಟ್ಟದ ಜೀವಿಗಳಾಗಲೇ ಇಲ್ಲವಲ್ಲಾ! . ಅವರು ಮಾತ್ರ ನಮ್ಮನ್ನು ಮೊದಲು ಆಗ ಕಂಡದ್ದಿಗಿಂತಲೂ ಎಲ್ಲಿಂದೆಲ್ಲಿಗೋ ಸಾಗಿ ಪ್ರಗತಿಶೀಲರಾಗಿ ಮುಂದೆ ಹೋಗಿದ್ದಾರಂತೆ...ಇದಕ್ಕೇ ನಮ್ಮ DNA ನಲ್ಲಿ**

**ಅನುನ್ನಾಕಿಗಳು ಅತಿ ಹೆಚ್ಚಿನ ಬೆಳವಣಿಗೆಯಾಗುವ ಶಕ್ತಿಯನ್ನೇ ನೀಡಿಲ್ಲ, ಅದನ್ನು ಮತ್ತೆ ಕಸಿ ಮಾಡಿ ಅಭಿವೃದ್ಧಿಗೊಳಿಸಬೇಕು ಎನ್ನುತ್ತಾರಂತೆ ಈ ಪ್ಲೆಡ್ಡಿಯನ್ನರು. ಇರಲಿ, ಅದು ಬೇರೆಯೇ ಕತೆ!**

- **ಇನ್ನೊಮ್ಮೆ ಈಗ ಭೂಮಿಗೆ ನಿಬಿರು ಗ್ರಹ ಬಂದಪ್ಪಳಿಸಿದರೆ (?) ಪ್ರವಾಹ ಪೀಡೆ, ವಿನಾಶವಾದೀತೆ ಎಂದು ಹಲವರಲ್ಲಿ ಪ್ರಶ್ನೆಯೆದ್ದಿದೆ:**

  **ಉತ್ತರ ಹೀಗೆ ಹೇಳಬಹುದು:-**

1. ಮೊತ್ತ ಮೊದಲಿಗೆ ನಮ್ಮ ಸರಕಾರಗಳು ಈ ಬಗ್ಗೆ ಏನೂ ಅಧಿಕೃತವಾಗಿ ಹೇಳಿಲ್ಲ.
2. ಆಗ ನಿಬಿರು ಬಂದಾಗ... ನಮ್ಮ ಭೂಮಿ ಅನುನ್ನಾಕಿ-ಪ್ಲೆಡ್ಡಿಯನ್ ಯುದ್ಧಾನಂತರ ಸರ್ವನಾಶದ ಸ್ಥಿತಿಯಲ್ಲಿ, ಅಣ್ವಸ್ತ್ರ ದಾಳಿಯಿಂದ ಸುಟ್ಟು ಬೆಂದು ಪ್ರಕೃತಿ ಅಪಾಯಕಾರಿಯಾದ್ದರಿಂದ ನಿಬಿರು ಹತ್ತಿರ ಬಂದಾಗ ಕಾಕತಾಳೀಯವಾಗಿಯೇ ಹಾಗಾಗಿರಬಹುದು, ಅಥವಾ ನಿಬಿರು ಸನಿಹ ಬಂದಾಗ ತರುವ ಪ್ರಭಾವಶಾಲಿ ಮ್ಯಾಗ್ನೆಟಿಕ್ ಪೋಲರೈಸಿಂಗ್ ಅಲೆಗಳೂ ಕಾರಣವಾಗಿರಬಹುದು, ಯಾರಿಗೂ ಸರಿಯಾಗಿ ಗೊತ್ತಿಲ್ಲ.
3. ಆಗಿನ ಪ್ರವಾಹದ ಕತೆಯನ್ನೇ ಆಧಾರವಾಗಿಟ್ಟುಕೊಂಡು ಕೆಲವು ಟಿವಿ ಸುದ್ದಿ ವಾಹಿನಿಗಳು ಈ ರೀತಿಯ ಕಾರ್ಯಕ್ರಮಗಳನ್ನು ಮಾಡುತ್ತಿರಬಹುದು.
4. ಇಲ್ಲಿ **ಪೂರ್ಣ ಸತ್ಯ/ ಪೂರ್ಣ ಸುಳ್ಳು** ಯಾರಿಗೂ ಗೊತ್ತಿಲ್ಲ. ಹಾಗಾಗಿ ಏನಾಗಬಹುದು ಎಂದು ಖಚಿತವಾಗಿ ಹೇಳಲಾಗದು.
5. ನಿಬಿರು ನಮ್ಮ ಧ್ರುವಗಳನ್ನು ಬದಲಿಸಿ ಉತ್ತರ -ದಕ್ಷಿಣವನ್ನು 'ಉಲ್ಟಾ' ಮಾಡಬಹುದು ಎನ್ನುತ್ತಾರೆ. ಈ ವಾದ ಒಂದು ರೀತಿ ಸರಿ ಕೂಡಾ. ನಿಬಿರು ಸುತ್ತುವುದೂ ವಕ್ರವಾಗಿಯೇ, ಉಲ್ಟಾ ದಿಕ್ಕಿನಲ್ಲಿ. ಜತೆಗೆ ಅದು ಬಹಳ ದೊಡ್ಡ ಶಕ್ತಿಶಾಲಿ ಗ್ರಹ, ನಮಗೆ ಅಥವಾ ಸೂರ್ಯನಿಗೆ ಹತ್ತಿರ ಬಂದಾಗ ಭೂಮಿಯಲ್ಲಿ ಮ್ಯಾಗ್ನೆಟಿಕ್ ಅಲೆಗಳು ಚದುರಿದಂತಾಗಿ, ನಮ್ಮಲ್ಲಿ ಸುನಾಮಿ, ಪ್ರವಾಹ, ಚಂಡಮಾರುತ, ಜ್ವಾಲಾಮುಖಿಗಳು ಹೆಚ್ಚೆಚ್ಚು ಕಾಣಬಹುದು ಎನ್ನುತ್ತಾರೆ... ಈಗಾಗಲೇ ಅಂತಾ ಸುದ್ದಿಗಳು ಹೆಚ್ಚು ಬರುತ್ತಿವೆ.
6. ಇನ್ನು ನಿಬಿರು ಯಾವಾಗ ಬರುತ್ತದೆ ಎಂದರೆ... ಆಗಿನ ಚರಿತ್ರೆಯ ಪ್ರಕಾರ ಈಗ ಬರಬೇಕಾಗಿತ್ತು, ಇನ್ನೂ ಕಾಣುತ್ತಿಲ್ಲ, "***ಆದರೆ ಅದು ಉತ್ತರ ಧ್ರುವದಲ್ಲಿ 2012 ರಿಂದ ಕಾಣುತ್ತಿದೆ, ಸರಕಾರಗಳು ಜನರಿಗೆ ಹೇಳಿಬಿಟ್ಟರೆ ಕೋಲಾಹಲ ಮಾಡಿಯಾರು ಎಂಬ ಭಯದಿಂದ ಮುಚ್ಚಿಟ್ಟಿದ್ದಾರೆ***"ಎಂದು ಹಲವರು ವಾದಿಸುತ್ತಾರೆ, ಅದಕ್ಕೂ ಸರಕಾರಗಳು ಸ್ಪಂದಿಸಿಲ್ಲ...ಇಂತಾ ವಿಚಾರದಲ್ಲಿ ನಮ್ಮ ಹಿಂದಿನ ಲೇಖನದಲ್ಲಿ- ಸರಕಾರಗಳು ಪಾರದರ್ಶಕವಾಗಿಲ್ಲವೇ ಇಲ್ಲ ಎಂಬುದೂ ನಮಗೆ ಗೊತ್ತಾಗಿದೆ...ಆದರೆ ಹೇಗೆ ಹೇಳುವುದು ಅಲ್ಲವೆ?

ಕಾದು ನೋಡಬೇಕು... ಒಂದು ಹಳೇ ಸುಮೇರಿಯನ್ ನಂಬಿಕೆ ಪ್ರಕಾರ -

*ಹಾಗೇನಾದರೂ ಆದರೆ ಅನುನ್ನಾಕಿ ತಮ್ಮ ಕಳೆದುಹೋದ/ ಬಿಟ್ಟುಹೋದ ಸಾಮ್ರಾಜ್ಯ ಸ್ಥಾಪಿಸಲು ಮತ್ತೆ ಬರುತ್ತಾರೆ ನಿಬಿರುದಿಂದ ಭೂಮಿಗೆ, ಮತ್ತೆ ನಶಿಸಿಹೋದ ಭೂಮಿಯನ್ನು ಕಟ್ಟಿಕೊಟ್ಟು ಮಾನವನನ್ನು ಸೃಷ್ಟಿ ಮಾಡುತ್ತಾರೆ" ಎನ್ನುತ್ತದೆ.*

ಇದೆಲ್ಲಾ ನಂಬುತ್ತಾ ಹೋದರೆ **ಇದು ವಿಜ್ಞಾನವೋ ಪುರಾಣವೋ , ನಮಗೆ ವ್ಯತ್ಯಾಸ ತಿಳಿಯುವುದಿಲ್ಲ!** ☺, 'ಅಂತೆ ಕಂತೆ'ಗಳ ಸಾಲು!

**ಪೂರ್ಣ ಸತ್ಯ ಯಾವುದು , ಪೂರ್ಣ ಅಸತ್ಯ ಯಾವುದು ಎಂಬುದು ಯಾರಿಗೂ ಗೊತ್ತಿಲ್ಲ! ಕಾಲಾಯ ತಸ್ಮೈ ನಮಃ, ಕಾಲವೇ ಉತ್ತರ ಹೇಳಬೇಕು..ಹೇಳುತ್ತದೆ!** ಮುಂದೆ...

(ಈ ಪ್ರಳಯ, ವಿನಾಶದ ನಂತರ ಉಳಿದವರ ಭೂಮಿಯಲ್ಲಿನ ನರಕಸದೃಶ ಕಷ್ಟಕರ ಜೀವನಶೈಲಿಯ ಬಗ್ಗೆ ಒಂದು ರೀತಿಯ ಹಾಲಿವುಡ್ ಚಿತ್ರಗಳೇ ಬಂದಿವೆ...- Post apocalypse genre ಮತ್ತು Dystopic world ಎನ್ನುತ್ತಾರೆ. ಅಂತವನ್ನು ನೋಡಿ. IMDB.com ನಲ್ಲಿ ಸರ್ಚ್ ಮಾಡಿ, ಸಿಗುತ್ತವೆ...ನಿಮ್ಮ ಕಣ್ತೆರೆಸುವ ಚಿತ್ರಗಳು!)

**ಈ ಅಧ್ಯಾಯದ ಬಗ್ಗೆ- ನಿಮ್ಮ ರೆಫರೆನ್ಸ್‌ಗಾಗಿ, ಇವನ್ನು ಓದಿ ಮತ್ತು ನೋಡಿ:**


1. https://www.youtube.com/watch?v=Dfl4ZaiucpQ&t=158s
2. https://www.express.co.uk/news/weird/838428/NASA-Planet-X-Nibiru-DESTROY-earth-next-month-August-21-total-solar-eclipse
3. https://www.youtube.com/watch?v=UJNCFdYAG30


~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~
~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~~

## 1947 ರ ರೋಸ್ವೆಲ್ ಹಾರುವ ತಟ್ಟೆ ಘಟನೆ- ಪ್ರತ್ಯಕ್ಷ ಕಂಡಿದ್ದನ್ನು ಮುಚ್ಚಿಟ್ಟ ಅಮೇರಿಕಾ

**Army Reveals It Has Flying Disc Found On Ranch In New Mexico**

ROSWELL, (N. M.), July 8.—(AP)—The army air forces here today announced a flying disc has been found on a ranch near Roswell and is in possession of the army. Lieutenant Warren Haught, public information officer of the Roswell Army Air Field, announced the find had been made "sometime last week" and had been turned over to the air field through cooperation of the sheriff's office.

**Higher Headquarters**

"It was inspected at the Roswell Army Air Field and subsequently loaned" by Major Jesse A. Marcell of the 409th Bomb Group intelligence office in Roswell "to higher headquarters."

The army gave no other details.

Haught's statement:

"The many rumors regarding the flying discs became a reality yesterday when the intelligence office of the 509th (atomic) Bomb Group of the 8th Air Force, Roswel Army Air Field, was fortunate enough to gain possession of a disc through the cooperation of one of the local ranchers and the sheriff's office of Chaves County.

"The flying object landed on a ranch near Roswell sometime last week. Not having phone facilities, the rancher stored the disc until such time as he was able to contact the sheriff's office, who in turn notified Major Jesse A. Marcel, of the 509th Bomb Group intelligence office.

**Inspected At Roswell**

"Action was immediately taken and the disc was picked up at the rancher's home. It was inspected at the Roswell Army Air Field and subsequently loaned by Major Marcel to higher headquarters.

The rancher's name and the location of his place were withheld.

George Walsh of radio station KSWS which provided first news of the announcement said only Major Marcel, Colonel W. H. Blanchard, commanding officer at Roswell, and the rancher had seen the object here.

The sheriff, Walsh reported, upon receiving word from the rancher went immediately to the intelligence officer at Roswell Field.



Roswell Daily Record

RAAF Captures Flying Saucer On Ranch in Roswell Region

Claims Army Is Stacking Courts Martial

House Passes Tax Slash by Large Margin

Security Council Paves Way to Talks On Arms Reductions

No Details of Flying Disk Are Revealed

Ex-King Carol Weds Mme. Lupescu

Harassed Rancher who Located 'Saucer' Sorry He Told About It




ಮೊತ್ತ ಮೊದಲು ಎಲ್ಲರೂ ಈ ಕೆಳಕಂಡ ಯೂ ಟ್ಯೂಬ್ ವಿಡಿಯೋ ಚಿತ್ರವನ್ನು ಮರೆಯದೇ ನೋಡಿ. UFO TV ನಿರ್ಮಿಸಿರುವ ಅಧಿಕೃತ ಮಾಹಿತಿ ಚಿತ್ರ. ಒಂದು ಗಂಟೆ ಉದ್ದದ್ದು!

https://www.youtube.com/watch?v=Yx3Vc6jCAI0

https://www.youtube.com/watch?v=01lMEmbFeSQ&t=1424s&fbclid=IwAR2BfKwqlqKvl2dpw67jwDGY_pJwvJSQrfhQp5RDL_nql405SRVRbWV__Ek

ಜುಲೈ 4 - ಅಮೇರಿಕಾ ಸಂಯುಕ್ತ ಸಂಸ್ಥಾನದ ಸ್ವಾತಂತ್ರ್ಯ ದಿನಾಚರಣೆ.

ಇಡೀ ದೇಶ ಸಂಭ್ರಮಾಚರಣೆ ಮಾಡುತ್ತಿದ್ದರೆ ನ್ಯೂ ಮೆಕ್ಸಿಕೋ ರಾಜ್ಯದ ಮರುಭೂಮಿಯಂತಾ ಸ್ಥಳದಲ್ಲಿ- ರೋಸ್ವೆಲ್ ಬಳಿಯ ಹಲವು ರೆಡಾರ್ ಅಪರೇಟರುಗಳು ಆಗಸದಲ್ಲಿ ಕೆಲವು ವಿಚಿತ್ರ ಹಾರುವ ವಾಹನಗಳನ್ನು ಕಂಡು ಚಕಿತರಾದರು. (***ಆಧಾರ: ದಿ ಡೇ ಆಫ್ಟರ್ ರೋಸ್ವೆಲ್ ~ ಕರ್ನಲ್ ಫಿಲಿಪ್ ಜೆ ಕಾರ್ಸೋ***)

ಇದು ಹಾಗೇ ಮುಂದುವರೆದಾಗ ಎಲ್ಲರೂ ತಮ್ಮ ವಾಯುಸೇನೆಯ ಕೇಂದ್ರ ಕಚೇರಿಗೆ ವರದಿ ಮಾಡಿದರು, ಅಲ್ಲಿಂದ 509ನೇ ಡಿವಿಷನ್ ಗೂಢಚಾರರ ಪಡೆಯನ್ನೂ ರೋಸ್ವೆಲ್ಲಿಗೆ ಕಳಿಸಲಾಯಿತು.

ಅಮೇರಿಕನ್ನರು ಮೊದಮೊದಲು ಯಾವುದೋ ಶತ್ರು ರಾಷ್ಟ್ರದ ಗೂಢಚಾರಿ ವಿಮಾನ ತಮ್ಮ ರೆಡಾರ್ ಹದ್ದುಗಣ್ಣಿನ ಕಾವಲನ್ನು ಭೇಧಿಸಿ ಒಳನುಗ್ಗಿ ವಾಯುಸೇನೆ ಬೇಸಿನ ರಹಸ್ಯ ಚಿತ್ರಗಳನ್ನು ತೆಗೆದುಕೊಳ್ಳುತಿರಬೇಕು ಎಂದುಕೊಂಡರಂತೆ.

ಹಲವಾರು ಅಲ್ಲಿನ ಗ್ರಾಮಸ್ಥರು, ವಾಯುಸೇನೆಯ ಆಫೀಸರರು ಶೀಘ್ರವೇ ಆಗಸದಲ್ಲಿ ದೊಡ್ಡ ಸ್ಫೋಟ ಮತ್ತು ಕಣ್ಣು ಕುಕ್ಕುವ ಮಿಂಚಿನಂತಾ ಬೆಳಕನ್ನೂ ಕಂಡು ಅವಾಕ್ಕಾಗಿ ಬೆದರಿದರಂತೆ. ಆಗಲೇ ಅದು ಸೇನೆಯ ರೆಡಾರುಗಳಿಂದ ಮಾಯವಾಯಿತು. ಆಗ ಎಲ್ಲರೂ 'ಅದು' ಕೆಳಗೆ ಬಿದ್ದು ಅಫಘಾತವಾಗಿರಲೇಬೇಕು ಎಂದು ನಿರ್ಧರಿಸಬೇಕಾಯಿತು.

**ಕರ್ನಲ್ ವಿಲಿಯಮ್ ಬ್ಲಾನ್ಚರ್ಡ್** ಅವರ ನೇತೃತ್ವದಲ್ಲಿ ಒಂದು ಗುಪ್ತ ಟೀಮು ಅದರ ಪತ್ತೆಗಾಗಿ ಧುಮುಕಿತು. ಅಗ ಅವರಿಗೆ ಇನ್ನೊಂದು (ಎರಡನೇ) ಗುಪ್ತ "ವಿಮಾನ" ವೂ ಅಲ್ಲೇ ಹತ್ತಿರ ಅಪ್ಪಳಿಸಿ ಅಪಘಾತವಾದ ಸುದ್ದಿ ಮುಟ್ಟಿ ಅವರು ಅದೆಲ್ಲವನ್ನೂ ಸಾರ್ವಜನಿಕರಿಂದ ಮುಚ್ಚಿಡಲು ಕಾತರರಾದರು. ಅದು ವಾಯುಸೇನೆಯವರ ಸಹಜ ಧರ್ಮವೇ ಆಗಿತ್ತು.

ಆದರೆ ಇವರೆಲ್ಲರಿಗೂ ಮುಂಚೆ ಕಾರ್ಯಾಚರಣೆ ಮಾಡಿದ್ದು ಲೋಕಲ್ **ಪೋಲೀಸ್ ಶೆರಿಫ್ ಜಾರ್ಜ್ ವಿಲ್ಕಾಕ್ಸ್** ಮತ್ತು ಅವರ ಚಿಕ್ಕ ಪೋಲಿಸ್/ ಅಗ್ನಿಶಾಮಕ ಪಡೆ, ಆ ಮರುಭೂಮಿಯ ರಸ್ತೆಯಲ್ಲಿ ಜೀಪಿನಲ್ಲಿ ದೌಢಾಯಿಸಿದರು ಹುಡುಕುತ್ತಾ. ಅವರ ಜತೆ ಮಿಲಿಟರಿ ಟೀಂ.

ಸ್ಟೀವ್ ಆರ್ನಾಲ್ಡ್ ಮತ್ತು ಇತರ ಮಿಲಿಟರಿ ಪೋಲೀಸರು ಮೊದಲು ಅಪಘಾತವಾದ ಸ್ಥಳ ತಲುಪಿ ಹೊನಲು ಬೆಳಕು ದೀಪಗಳು ಮತ್ತು ಬಂದೋಬಸ್ತ್ ವ್ಯವಸ್ಥೆ ಮಾಡಲಾಗಿ.... ಅಲ್ಲಿ ಕಂಡಿದ್ದೇನು??

ಅದು ಯಾವ ಸಾಮಾನ್ಯ ವಿಮಾನವೇನೂ ಆಗಿರಲಿಲ್ಲ. ಯಾರೂ ಕಾಣದಂತ ಗುಂಡನೆ ಮೆಟಲ್ಲಿನಲ್ಲಿ ಹೊಳೆಯುತ್ತಿದ್ದ ಮೈಯುಳ್ಳ ಹಾರುವ ತಟ್ಟೆ ವಾಹನ!

ಚಿಕ್ಕ ಪುಟ್ಟ ಪೀಸುಗಳನ್ನು- ಅತ್ತಿತ್ತ ಹರಡಿದ್ದು- ಬಿಟ್ಟರೆ ಈ ನೌಕೆ ಭದ್ರವಾಗಿಯೇ ಇತ್ತು.

ಬೆಳಕು ಫೋಕಸ್ ಮಾಡಿ ನೋಡಿದರೆ, ಅರೆ ಅದೇನು?- ನೆಲದ ಮೇಲೆ ಬಿದ್ದಿರುವ ನಾಲ್ಕು ಬೂದಿ ಬಣ್ಣದ ಚಿಕ್ಕ ಮನುಷ್ಯರಂತಾ ಜೀವಿಗಳು!!

ಇಲ್ಲಿಂದ ಮುಂದೆ ನಮಗೆ ಯಾವ ಅಧಿಕೃತ ವರದಿಯ ಆಧಾರವೂ ಇಲ್ಲ. ಈ ಕಂತಿನ ಜತೆ ಇದರ ಬಗ್ಗೆ ಒಂದು ಸುಧೀರ್ಘ ಕತೆ/ ವರದಿಯಿರುವ ಇಂಗ್ಲೀಷ್ PDF ಪುಸ್ತಕವನ್ನು Download ಕೊಡುತ್ತೇನೆ. ನೀವೇ ಓದಿ ತೀರ್ಮಾನಿಸಿ. ***(ದಿ ಡೇ ಆಫ್ಟರ್ ರೋಸ್ವೆಲ್ ~ ಕರ್ನಲ್ ಫಿಲಿಪ್ ಜೆ ಕಾರ್ಸೋ***).

ನಮಗೆ ತಿಳಿದಿರುವುದು ಇಷ್ಟೇ:

- ಅಲ್ಲಿನ ನೌಕೆಯ ಅವಶೇಷಗಳನ್ನು ದೊಡ್ಡ ಮಿಲಿಟರಿ ಟ್ರಕ್ಕುಗಳಲ್ಲಿ ಸಾಗಿಸದ್ದನ್ನು ಜನರು ವರದಿ ಮಾಡಿದ್ದಾರೆ.
- ಒಂದೆರಡು ಅನ್ಯಗ್ರಹ ಜೀವಿ ನಮೂನೆಗಳು ಇದ್ದವಂತೆ- ಒಂದು ಜೀವಂತ, ಒಂದು ಸತ್ತದ್ದೆಂದೂ ಆ ಕಾಲದ ಡಿಫೆನ್ಸಿನವರು ನಂತರ ಮಾಧ್ಯಮಗಳ ಮುಂದೆ ಹೇಳಿಕೊಂಡಿದ್ದಾರೆ.
- ಹಲವಾರು ಹತ್ತು ಬಗೆಯ ಪುಕಾರುಗಳು ಇವೆ…ಇವರು ಪ್ಲೇಯ್ಡಿಯನ್ ಗ್ರೇಯ್ಸ್, ಇಲ್ಲವೇ ಝಿಟಾ ರೇಟಿಕ್ಯುಲಿ ಎಂದು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿದ, ಗ್ರಹಗಳವರು ಎಂದು (ನಮಗೆ ಪರಿಚಿತವಾದ) ಗ್ರೇಯ್ಸ್ ಜೀವಿಗಳು- ತಮ್ಮ ವಾಹನದ ತಾಂತ್ರಿಕ ದೋಷದಿಂದ ನಿಯಂತ್ರಣ ತಪ್ಪಿ ನೆಲಕ್ಕೆ ಬಿದ್ದರು ಎಂದೆಲ್ಲಾ…
- ಹಾಗೆ ಸೆರೆ ಸಿಕ್ಕ ಜೀವಿ ಮತ್ತು ಹೆಣವನ್ನು ಸರಕಾರ ತಾನ್ ಏರಿಯಾ 51 ಪ್ರಯೋಗಾಲಯಕ್ಕೆ ಸಾಗಿಸಿತೆಂದೂ ಅಲ್ಲಿ ಆ ಜೀವಿಯನ್ನು "ಹಲವು ಬಾರಿ ವಿಚಾರಣೆಗೆ ಒಳಪಡಿಸಿದರೆಂದೂ" ಹೇಳುತ್ತಾರೆ. ಅದು ತನ್ನಸ್ತ್ರ ಶಸ್ತ್ರ ಕಳೆದುಕೊಂದು ನಮ್ಮ ವಶವಾಗಿದೆ ಅಸಹಾಯಕನಾಗಿ..( ಚಿತ್ರಹಿಂಸೆ ಮಾಡಿರಲಾರರು ಎಂದು ನಂಬೋಣ) ಮಿಕ್ಕ ಹೆಣಗಳನ್ನು ಪ್ರಯೋಗಾಲಯದಲ್ಲಿ ಪೋಸ್ಟ್ ಮಾರ್ಟೆಮ್ ಮಾಡಿದರಂತೆ ವೈದ್ಯರು. ಎಲ್ಲವೂ ಇದುವರೆಗೆ ಅಧಿಕೃತವಾಗಿ ಹಗೂ ಹೊರಬಂದಿಲ್ಲ,( ಇದರ ಟ್ರೆಂಡ್ ನಮಗಾಗಲೇ ಗೊತ್ತಿದೆ)
- ಅದು ನಮಗೆ ಮಾನಸಿಕವಾಗಿ/ ಟೆಲಿಪತಿಯ ಮೂಲಕ ಹತ್ತು ಹಲವು ವಿಷಯಗಳನ್ನು ಹೇಳಿತು ಎನ್ನಲಾಗಿದೆ.
- ಅದು ಸಸ್ಯಗಳಂತೆ ತನ್ನ ಆಹಾರವನ್ನು ತಾನೇ ಉತ್ಪಾದಿಸಿಕೊಳ್ಳಬಲ್ಲ  ಹರಿತ್ತು (ಕ್ಲೋರೋಫಿಲ್) ಜೀವಿಯೆಂದೂ, ಅಸ್ವಸ್ಥನಾಗಿ ತುಂಬಾ ನರಳಿತೆನ್ನುತ್ತಾರೆ. ಇಲ್ಲಿನ ಹವೆ ಏನೇನೂ ಮಾಡಿದರೂ ಅದಕ್ಕೊಗ್ಗಲಿಲ್ಲವೋ ಏನೋ! ಅವು ತಮ್ಮನ್ನು ತಾವೇ ಕ್ಲೋನ್ ಮಾಡಿಕೊಳ್ಳುತ್ತಾ ಹೊಸ "ಜೀವಿ ಮರಿ"ಗಳನ್ನು ಉತ್ಪಾದಿಸುವುವಂತೆ. ಅವೆಲ್ಲಾ ನಮ್ಮ ಅರ್ಥದಲ್ಲಿ - ನಪುಂಸಕರಂತೆ. (ಅವು ಗುಲಾಮ ಜೀವಿಗಳೆಂದೂ ಅವುಗಳ ನಿರ್ಮಾಪಕರು ಮಾನವರಂತಿರುವರ ಅನುನಾಕಿ/ ಪ್ಲೆಯ್ಡಿಯನ್ನರು ತರಹದವರು ಇರಬಹುದಂತೆ . ಅವರು ಇವರನ್ನು ಕೆಲಸದ ಮೇಲೆ ಭೂಮಿಗೆ ಟೂರ್ ಕಳಿಸುತ್ತಾರೆ ಎಂದು ಕೆಲವು ಪುಸ್ತಕಗಳಲ್ಲಿ ಹೇಳಿದ್ದಾರೆ! (ನಗು ಬರುತ್ತಿದೆಯೆ? ☺))
- ಅದರ ( ರೋಗಿಯ) ಚಿಕಿತ್ಸೆಗೆ ಒಬ್ಬ ವೈದ್ಯರನ್ನೂ ಗೊತ್ತು ಮಾಡಿದರೆಂದೂ, ನಮ್ಮ ಯಾವ ಚಿಕಿತ್ಸೆ, ಔಷಧಿಗೆ ಬಗ್ಗದ ಅದು ಹಲವು ವರ್ಷ ಹಾಗೇ ಇದ್ದು ಅಸು ನೀಗಿತು ಎನ್ನುತ್ತಾರೆ. ಅವುಗಳನ್ನು ತಮ್ಮ ಗ್ರಹಗಳಿಗೆ ವಾಪಸ್ ಕಳಿಸಲು ನಮ್ಮ ಬಳಿ ಯಾವ ಸಾಧನವೂ ಇರಲಿಲ್ಲ ( ಇಂದಿಗೂ ಇಲ್ಲ!), ಅವರ ಗಗನನೌಕೆಯೇ ನಾಶವಾದ ಮೇಲೆ?. ಅಮೆರಿಕಾದ ಸರಕಾರವೂ ಅಸಹಾಯಕವಾಗಿತ್ತು ಆ ದೃಷ್ಟಿಯಲ್ಲಿ.  ಅಪರಿಚಿತನೊಬ್ಬ ಅನ್ಯಸ್ಥಳದಲ್ಲಿ ಯಾವುದೇ ಗುರುತು ಪತ್ರ ಇಲ್ಲದೇ ಸರಕಾರಿ ಆಸ್ಪತ್ರೆಯಲ್ಲಿ ಸತ್ತಂತೆ!
- ಇನ್ನೊಂದು ಹೆಣದ ಶವಪರೀಕ್ಷೆ ಮಾಡಿದರಂತೆ. ಅದರ ಅಂಗಾಂಗ ರಚನೆ ಮತ್ತು ಜೈವಿಕ ರಹಸ್ಯಗಳನ್ನು ಸರಕಾರಿ ಸಂಶೋಧಕರೂ ಪಡೆದು ಎಲ್ಲ ತಮ್ಮ ದೇಶದ ಪ್ರೆಸಿಡೆಂಟ್ ಕಣ್ಣಿಗೆ ಮಾತ್ರ (For Your Eyes Only) ಕಾಣುವ ಫೈಲುಗಳಲ್ಲಿ ಈಗ 'ಜೋಪಾನ'ವಾಗಿದೆಯಂತೆ.
- ಈ ಕೆಳಕಂಡ ಚಿತ್ರಗಳು ನಂಬಿಕಾರ್ಹ ಎನಿಸುವಂತಿದೆ ( ಇದು ನಿಜವೆ, ಸುಳ್ಳೇ ಎಂದು ಕೇಳಿದರೆ ನನ್ನ ಬಳಿ ಹೆಚ್ಚಿನ ಉತ್ತರವಿಲ್ಲ, ನಿಮಗೇನನಿಸುತ್ತಿದೆ?)

ವೈದ್ಯರು ಪರೀಕ್ಷಿಸುತ್ತಿರುವ ಈ ಜೀವಿ



ಮಾನವನಂತಿದೆಯೆ? ಸ್ವಲ್ಪ ಗಮನಿಸಿ.






?

1947 ರ ಕಪ್ಪು ಬಿಳುಪು ಚಿತ್ರ. ಫೋಟೋ ಶಾಪ್ ಇತ್ಯಾದಿ ಇಲ್ಲದ ಕಾಲದ ಹಳೇ ಚಿತ್ರ.  ಹೆಣದ ಕಂಗಳನ್ನು, ದೇಹರಚನೆಯನ್ನೂ ಗಮನಿಸಿ. ಮಗುವಿನಂತೇ ಕಂಡರೂ ಮಾನವ ಮಗುವಂತೂ ಅಲ್ಲ , ಅಲ್ಲವೆ?






ರೋಸ್ವೆಲ್ ನಲ್ಲಿ ಸಿಕ್ಕ ಗಗನನೌಕೆಯ ಚಿತ್ರವಂತೆ ಇದು. ಅಮೇರಿಕಾ ರಕ್ಷಣಾ ಪಡೆ ತನ್ನ ರಹಸ್ಯ ಅಡ್ಡಾ- ಏರಿಯಾ 51ಕ್ಕೆ ಒಯ್ದಿದ್ದು- 1947ರ ಗುಪ್ತ ಚಿತ್ರ..

- ಅವಶೇಷಗಳನ್ನು ಫಿಸಿಕಲ್ ಪರೀಕ್ಷೆ ಮಾಡಿದಾಗ, ಆ ಪದಾರ್ಥವನ್ನು ಪೂರ್ತಿ ಎರಡು ಬೆರಳ ಮಧ್ಯೆ ನೂರು ಮಡಿಕೆ ಬೇಕಾದರೂ ಮಾಡಬಹುದು, ಹಗುರವಾಗಿದೆ ಆದರೆ ಎಷ್ಟು ಬೇಕಾದರೂ ಮಡಿಚಿ ನೋಡಬಹುದು ಕೈ ತೆಗೆದರೆ ಪರ್‍ರನೆ ಮತ್ತೆ ಶೀಟಿನಂತೆ ಮತ್ತೆ ಬಿಚ್ಚಿಕೊಳ್ಳುತ್ತದೆ ಎಂದೂ ಹೇಳುತ್ತಾರೆ
- ಇನ್ನೊಂದು ಸ್ಫೋಟಕ ರಹಸ್ಯ ಮಾಹಿತಿ ಪ್ರಕಾರ: 1950-1960ರವರೆಗೂ ಅಮೆರಿಕನ್ ವಿಜ್ಞಾನಿಗಳು ಪ್ರಯೋಗಾಲಯದಲ್ಲಿ ಈ ಗಗನ ನೌಕೆಯ ಅವಶೇಷಗಳನ್ನು ಎಲ್ಲ ಬಗೆಯ ಪರೀಕ್ಷೆಗೂ ಒಳಪಡಿಸಿದರಂತೆ. ಆದರೆ ಅದರ ಮೆಟಲ್ ಕಾಮ್ಪೋಸಿಷನ್ ಯಾವುದು ಎಂದು ಪತ್ತೆ ಹಚ್ಚಲಾಗಲಿಲ್ಲ. ಮೈಕ್ರೋಸ್ಕೋಪಿನಲ್ಲಿಯೂ ಆ ವಸ್ತು ಯಾವ ರಾಸಾಯನಿಕ ಎಂದು ಖಚಿತವಾಗಲಿಲ್ಲ. ಅದು ಈ ಭೂಮಿಯಲ್ಲಿ ಸಿಗುವ ವಸ್ತುವಂತೂ ಅಲ್ಲ ಎಂದು ಕೈ ತೊಳೆದುಕೊಂಡರಂತೆ (ಲಿಟರಲೀ!)

- ಕೆಳಗಿನ ವಾಯು ಸೇನೆಯ ಅಧಿಕಾರಿ ಕೈಯಲ್ಲಿ ಏನಿದೆ? ಇದೇ ಅಲ್ಲವೆ ಅದರ ಅವಶೇಷ?



ಸರಿ, ಅಮೇರಿಕನ್ನರೇನೋ ಇದನ್ನು ಸರಕಾರೀ ಮೂಲಗಳ ಬಾಯಿಗೆ ಬೀಗ ಜಡಿದು, ಹೆದರಿಸಿ ಬೆದರಿಸಿ ಅವರನ್ನು ಸುಮ್ಮನಾಗಿಸಿದರು. ಹಾಗೇ ನಿಗೂಢವಾಗಿ ಅದೇನು ಸಾಧಿಸುತ್ತಾರೋ ಮಾಡಿಕೊಳ್ಳಲಿ.

ಅದನ್ನು ಅವರಿಗೆ ಬಿಟ್ಟು, ಇನ್ನೊಂದು ವಿಷಯಕ್ಕೆ ಬರೋಣ...

## 10.2 ಮಾನವ ಅಪಹರಣ ಮಾಡಿ, ನಮ್ಮಲ್ಲಿ ತಮ್ಮ ಮೊಟ್ಟೆ ಇಟ್ಟರೆ, ಅನ್ಯಗ್ರಹ ಜೀವಿಗಳು?

ಹಲವು ಮಾನವ ಅಪಹರಣ ಕೇಸುಗಳಾದವರಲ್ಲಿ ಹಲವರು ಸುಪ್ತಾವಸ್ಥೆ ಪರೀಕ್ಷೆಯಲ್ಲಿ ಕೆಲವು ಸಂಗತಿಗಳನ್ನು ಹೇಳಿಯೇ ಬಿಟ್ಟಿದ್ದಾರೆ. ಅವನ್ನೆಲ್ಲಾ ಸಂಗ್ರಹ ಮಾಡಿ ಹೇಳುವುದಾದರೆ:

- ಸಾಧಾರಣವಾಗಿ ಈ ಗ್ರೇಯ್ಸ್ ಎಂದು ಪ್ರಚಲಿತವಿರುವ ಈ ಬೂದು ಬಣ್ಣದ ಗಿಡ್ಡ ಜೀವಿಗಳೇ ಜೀಟಾ ರೆಟಿಕ್ಯುಲಿಯ ವಾಸಿಗಳು, ಇವು ಕ್ಷುದ್ರಜೀವಿಗಳು.ಎನ್ನಲಾಗಿದೆ. ಅಂದರೆ ತಮ್ಮ ಸ್ವಾರ್ಥಕ್ಕಾಗಿ, ಅಳಿವು ಉಳಿವಿಗಾಗಿ ಬರುತ್ತಿವೆ, ನಮಗಾಗಿ ಅಲ್ಲ ಎಂಬರ್ಥದಲ್ಲಿ. ಅದರಲ್ಲಿಯೂ ಎರಡು ಬಗೆಯವು ಇದೆಯಂತೆ. ಇನ್ನೊಂದನ್ನು ನಂತರ ತೆಗೆದುಕೊಳ್ಳುತ್ತೇನೆ.
- 'ಇವರು' ಈ ಭೂಮಿಯ ಕೆಲವರನ್ನು ಚಿಕ್ಕ ವಯಸ್ಸಿನಲ್ಲೇ ಆಯ್ದುಕೊಂಡು, ಜೀವನ ಪರ್ಯಂತ ಅವರನ್ನೇ ಮತ್ತೆ ಮತ್ತೆ ಅಪಹರಿಸುತ್ತಾರೆ. ಯಾಕೆಂದರೆ ಅವರಲ್ಲಿ ಪುರುಷರ ವೀರ್ಯ ಮತ್ತು ಸ್ತ್ರೀಯರಾದರೆ ಅವರ ಅಂಡಾಶಯದ ಮೇಲೆ ನಮೂನೆ ತೆಗೆದು ಜೈವಿಕ ಪ್ರಯೋಗ ಮಾಡಿ ಅಂದರೆ ಹೈಬ್ರಿಡ್ (ಮಿಶ್ರತಳಿ) ಜೀವಿಗಳನ್ನು ಬೆಳೆಸುತ್ತಾರೆ

- ಮಹಿಳೆಯರಲ್ಲಿ ಬೆಳೆಯುವ ಭ್ರೂಣವನ್ನು ಹೊರತೆಗೆದು ಅವರು ಅವನ್ನು ವಿಶೇಷ ಪ್ರಯೋಗಾಲಯದಲ್ಲಿ ಬೆಳೆಸುತ್ತಾರಂತೆ. ಟೆಸ್ಟ್ ಟ್ಯೂಬ್ ಬೇಬಿಯಂತೆ!
- ಹಲವು ಅಪಹೃತ ಮಹಿಳೆಯರಿಗೆ ಅನಿಸಿದ್ದು- ರಾತ್ರಿ ಹಾಸಿಗೆಯಿಂದ ಎಬ್ಬಿಸಿ ಗಾಳಿಯಲ್ಲಿ ತಮ್ಮ ಮನೆಯ ಗೋಡೆ ಸೂರುಗಳ ಮೂಲಕ ಆಗಸಕ್ಕೆ ಮೇಲೆ ಹಾರಿಸಿಕೊಂಡು ಕರೆದುಕೊಂಡು ಹೋಗುತ್ತಾರಂತೆ
- ಅಲ್ಲಿ ಯಾವುದೋ ದೀಪಗಳಿಲ್ಲದಿದ್ದರೂ ಬೆಳಕು ಮಾತ್ರ ಚೆಲ್ಲಿರುವಂತಾ ಮೆಡಿಕಲ್ ಆಪರೇಷನ್ ಕೋಣೆಯಲ್ಲಿ ಮಲಗಿದ್ದಂತೆ, ದೇಹದ ವಿವಿಧ ನಮೂನೆಗಳನ್ನು (ಉಗುರು, ಕೂದಲು, ಎಂಜಲು, ವೀರ್ಯ ಇತ್ಯಾದಿ) ತೆಗೆದುಕೊಂಡಂತೆ ಭಾಸವಾಗುವುದು. "ನೋವಾಗದು" ಎಂದು ಅವರು ಸಮಾಧಾನ ಪಡಿಸುತ್ತಾರೆ. ಆದರೂ ಮೈಯೊಳಗೆ ವಿಚಿತ್ರ ಭಾವನೆ/ ಸಂವೇದನೆ ಬರುವುದು ಸಹಜ ತಾನೆ!






- ಅಲ್ಲಿ ಕೆಲವು ಕೃಶ ಮಕ್ಕಳು ಇದ್ದರೆ ಮಹಿಳೆಯರಿಗೆ ಅವನ್ನು ತೋರಿಸಿ-"ಇವು ನಿಮ್ಮ ಮಕ್ಕಳು , ನಿಮ್ಮ ತಾಯಿ ಮಮತೆ, ಸಂಗವಿಲ್ಲದೆ ಸೊರಗಿವೆ, ಕೊರಗಿವೆ , ಇದನ್ನು ಅಪ್ಪಿಕೊಳ್ಳಿ, ಸಮಾಧಾನ ಮಾಡಿ" ಎಂದು ಅವನ್ನು ಕೊಡುತ್ತಾರಂತೆ. ಆ ಮಕ್ಕಳು ಆ ಅಮ್ಮನ ಸಂಗದಲ್ಲಿ ತೃಪ್ತರಾದಮೇಲೆ ಈ ಮಹಿಳೆಯರು ಅನಾಯಾಸವಾಗಿ ತಮ್ಮ ಮನೆಯ ಹಾಸಿಗೆಯಲ್ಲಿ ಮತ್ತೆ ಎಚ್ಚರಗೊಳ್ಳುತ್ತಾರೆ.







- ಆದರೆ ಎಲ್ಲಿಗೆ ಹೋಗಿದ್ದೆವು ಎಂದು ಯಾರೊಬ್ಬರಿಗೂ ಆಗ ನೆನಪಿಗೆ ಬರುವುದಿಲ್ಲ. ಆದರೆ ಮನೋವಿಜ್ಞಾನಿಗಳು ವಶೀಕರಣ ಮಾಡಿದಾಗ ಸುಪ್ತಾವಸ್ಥೆಯಲ್ಲಿ ಸೂಕ್ಷ್ಮ ಶರೀರದಲ್ಲಿ ಹೀಗೆ ಹೋಗಿ ಬಂದಿದ್ದನ್ನು ಎಲ್ಲರೂ "ಒಂದೇ ಬಗೆಯಲ್ಲಿ" ವಿವರಿಸುತ್ತಾರೆ. ಹಲವು ದೇಶ- ರಾಜ್ಯಗಳ, ಹಲವು ಕಾಲಘಟ್ಟಗಳ, ಹಲವು ಬಗೆಯ ವಿದ್ಯಾವಂತರೂ, ವ್ಯತ್ಯಾಸವುಳ್ಳ ಆರೋಗ್ಯದವರು ಬೇರೆ ಬೇರೆಯಾಗಿ "ಒಂದೇ ರೀತಿಯ ಅನುಭವಗಳನ್ನು" ಹೇಳಿದರೆ ಏನರ್ಥ? ಎಲ್ಲರೂ ಒಬ್ಬರನ್ನೊಬ್ಬರು ಮೀಟ್ ಮಾಡಿ ಈ ಕುತಂತ್ರ ಮಾಡಿ ಸಾಮೂಹಿಕವಾಗಿ ನಮಗೆ ಮೋಸಮಾಡಿದರಂದೂ ಮನೋವಿಜ್ಞಾನಿಗಳೇ ಒಪ್ಪುವುದಿಲ್ಲ. ಎಲ್ಲರೂ ಜನಸಾಮಾನ್ಯರು, ಕಪಟ ತಿಳಿಯದ ರೈತರು, ಹಳ್ಳಿಗರೂ ಸಹಾ ಇದ್ದಾರೆ ಇಂತವರಲ್ಲಿ.
- **ತಾಯಿ ಮಮತೆಯನ್ನು ಮಾತ್ರ ಅನ್ಯಗ್ರಹ ಜೀವಿಗಳು ಹುಟ್ಟಿದ ಮಕ್ಕಳಿಗೆ ಕೊಡಲಾರರು**...ಅವೇ ನಪುಂಸಕರಂತೆ ಕ್ಲೋನ್ ಆಗಿ ಇದರ ಗಂಧವೇ ಇಲ್ಲದೇ ಹುಟ್ಟಿದ ಜೀವಿಗಳು, ಬರೇ ವೈಜ್ಞಾನಿಕವಾಗಿ ಮುಂದುವರೆದವು, ಭಾವನಾತ್ಮಕವಾಗಿ ಅಲ್ಲ..ಎಂತಾ ವಿಚಿತ್ರ ಅಲ್ಲವೆ?
- "***ಈ ಜಗ ಅಪ್ಪ ಅಮ್ಮನ ಮಗ, ಅಮ್ಮನೊಳಗ ಅಪ್ಪನ ಮೊಗ"*** ಎಂದರು ವರಕವಿ ಬೇಂದ್ರೆ ನಾಕುತಂತಿಯಲ್ಲಿ..ಎಲ್ಲೇ ಈ ರೀತಿ ಪ್ರಕೃತಿ ಪುರುಷರ ಮಿಲನದಿಂದ ಸೃಷ್ಟಿಯಾಗಿದ್ದರೆ, ತಂದೆ- ತಾಯಿ - ಮಗು ಇವೆಲ್ಲಾ ಸಂಬಂಧಗಳು ಇದ್ದೇ ಇರುತ್ತದೆ ಎಂದಂತಾಯಿತು. ಅಲ್ಲವೆ?
- ಈ ರೀತಿಯಲ್ಲಿ ಹುಟ್ಟಿದ/ ಉತ್ಪತ್ತಿಯಾದ ಹೈಬ್ರಿಡ್ ಮಾನವ-ಹೋಲಿಕೆಯ ಮಕ್ಕಳು ಅತ್ತ ಅನ್ಯಗ್ರಹ ಜೀವಿಗಳ ಆಯಾಮ ಬದಲಿಕೆ, ತಂತ್ರಜ್ಞಾನ ಆಧುನಿಕತೆ ಅಲ್ಲದೇ ಮಾನವನ ದೇಹ, ಈ ಗ್ರಹಕ್ಕೆ ಸೂಕ್ತವಾದ ಆರೋಗ್ಯ ಆಹಾರ ಪದ್ಧತಿ, ಹೋಲಿಕೆ, ಎರಡೂ ಹವೆಗೆ ಒಗ್ಗುವಿಕೆ- ಈ ಎಲ್ಲವನ್ನೂ ಪಡೆದು ಸಾಮಾನ್ಯ ಮಾನವನಿಗಿಂತಾ ಮುಂದುವರೆದ "ಹ್ಯುಮನಾಯ್ಡ್: ಸೂಪರ್ ಮ್ಯಾನ್" ಗಳಾಗಬಹುದೇನೋ... ಟರ್ಮಿನೇಟರ್ ಚಿತ್ರಗಳಲ್ಲಿ ಸೈಬೋರ್ಗ್ ಇರುವುದಿಲ್ಲವೇ ಆ ರೀತಿ!... ಆ ಸರಣಿ ಚಿತ್ರಗಳನ್ನು ನೋಡಿಲ್ಲದಿದ್ದವರು ನೋಡಿ (Terminator –starring Arnold schwarznegger https://www.imdb.com/find?ref_=nv_sr_fn&q=Tereminator&s=all )

- ಅವರು ತಮ್ಮ ಗ್ರಹದಲ್ಲಿ 'ಅವರನ್ನು' ಇಟ್ಟುಕೊಳ್ಳುತ್ತಾರೋ, ಇಲ್ಲವೇ ಇಲ್ಲಿಗೆ ತಂದು ಬಿಟ್ಟು ನಮ್ಮನ್ನೇ ಗೆದ್ದು ಇಲ್ಲೇ ವಸಾಹತು ಮಾಡಿಕೊಂಡುಬಿಟ್ಟರೆ? ..ಈ ಎಲ್ಲಾ ಭಯ, ಸಂದೇಹ, ಅದಕ್ಕೆ ತಕ್ಕ ಮರುದಾಳಿಯ ತಯಾರಿ ಎಲ್ಲಾ ಪ್ರಪಂಚದ "ದೊಡ್ಡಣ್ಣ" - ಅಮೆರಿಕಾದ ಭುಜದ ಮೇಲೆ ಬಿದ್ದಿರುವುದೂ ಆಗ ಸತ್ಯವಾಗುತ್ತದೆ.

ಇನ್ನೊಂದು ವಿಚಿತ್ರವಾದ ಸನ್ನಿವೇಶವೆಂದರೆ ಆ ಅಪಹರಣವಾದವರಿಗೆ **ಹಲವೊಮ್ಮೆ ತಾವು ಮಲಗಿದ್ದ, ಪ್ರಯಾಣ ಮಾಡುತ್ತಿದ್ದ ಸ್ಥಳಕ್ಕಿಂತಾ ದೂರದಲ್ಲೆಲ್ಲೋ ಮತ್ತೆ ಎದ್ದಿರುತ್ತಾರೆ...ಕೆಲವು ಗಂಟೆಗಳಾಗಿವೆ ಎಂದು ತಾವು ಭಾವಿಸಿದರೆ ಇಲ್ಲಿ ನಿಜಕ್ಕೂ ಕ್ಯಾಲೆಂಡರಿನಲ್ಲಿ ಮೂರರಿಂದ ಐದು ದಿನಗಳೇ ಕಳೆದು ಹೋಗಿ ಎಲ್ಲರೂ ಇವರನ್ನು ಹುಡುಕುತ್ತಿರುತ್ತಾರಂತೆ**

ಈ ಫೆನಾಮೆನಾ (ಅಪೂರ್ವ ಸಂಗತಿ) ವನ್ನು ನಾವಾಗಲೇ ನೋಡಿದ್ದೇವೆ.

**ಟೈಮ್ ಡೈಲೇಷನ್**- ನಮ್ಮ ಸಮಯಕ್ಕೂ ಅಂತರಿಕ್ಷದ ಹೊರಗಿನ ಜೀವಿಗಳಿಗೂ ಇರುವ ಜೈವಿಕ ಗಡಿಯಾರದ ವ್ಯತ್ಯಾಸ. ನಾವು ಅವರ ಸಮಯದಲ್ಲಿ ಕೆಲವು ಗಂಟೆಗಳೇ ಕಳೆದಿದ್ದರೆ, ಇಲ್ಲಿ ಹಲವು ದಿನಗಳೇ ಉರುಳಿಹೋಗಿರುತ್ತವೆ. ಅದಕ್ಕೆ ಅವರ ಆಯುಷ್ಯ ನಮಗಿಂತಾ ನೂರಾರು ವರ್ಷ ಹೆಚ್ಚು ಎನ್ನುವುದು ಸಹಾ... ಇದು ನಮಗಾಗಲೇ ಗೊತ್ತು ಸಹಾ.. ಸ್ಪೇಸ್ ಪ್ರಯಾಣ ಮಾಡುವಾಗ ಹೊರಗೆ ಸಮಯ ನಿಧಾನವಾಗಿ ಸಾಗುತ್ತದೆ. ನಾವು ಯೌವನದಲ್ಲಿದ್ದಾಗ ಅಂತರಿಕ್ಷವನ್ನು ಒಂದೆರಡು ವರ್ಷ ಸುತ್ತಿಬಂದರೆ, ಇಲ್ಲಿ ನಮ್ಮ ಸರೀಕರೆಲ್ಲಾ ಅಜ್ಜಿ ತಾತಗಳಾಗಿರುತಾರೋ. ಅಥವಾ ತೀರಿ ಹೋಗಿಯೇ ಬಿಟ್ಟು ಹೊಸ ಪೀಳಿಗೆಯೇ ಬಂದುಬಿಟ್ಟಿರುತ್ತದೆ, **Interstellar (2014)** ಎಂಬ ಹಾಲಿವುಡ್ ಚಿತ್ರದಲ್ಲಿ ಇದನ್ನು ಚೆನ್ನಾಗಿ ತೋರಿಸಿದ್ದಾರೆ, ಸಾಧ್ಯವಾದರೆ ಅದನ್ನು ನೋಡಿ..

ಅದಕ್ಕೆ ನಮಗೂ "ಅವರಿಗೂ" ಆಯುಷ್ಯದ ವ್ಯತ್ಯಾಸ ಬರುವುದು, ಮನುಷ್ಯನಿಗೂ, ದೇವತೆಗಳಿಗೂ ಹಾಗೇ ವ್ಯತ್ಯಾಸವಿದೆ




ಎನ್ನುತ್ತಾರೆ ಕೆಲವು ಕಡೆ....

ನೀವೇ ಅಧ್ಯಯನ ಮಾಡಿ ನೋಡಿ.

https://www.businessinsider.in/Heres-why-astronauts-age-slower-than-the-rest-of-us-here-on-Earth/articleshow/48549659.cms

ನಮಗೆ ಸೂರ್ಯನಿಂದ ಬರುವ ಕಿರಣ ಭೂಮಿಗೆ ತಲುಪಲು **8 ನಿಮಿಷ 20 ಸೆಕೆಂಡ್** ತೆಗೆದುಕೊಳ್ಳುತ್ತದೆ. ಅಂದರೆ ದೂರದೂರದ ತಾರೆಗಳನ್ನು ನೋಡಿದಾಗ ಅವು ಯಾವ ಕಾಲದಲ್ಲೋ ಬಿಟ್ಟ ಬೆಳಕು ಇದೀಗ ನಮ್ಮ ಕಣ್ಣಿಗೆ ಕಾಣುತ್ತಿದೆ... ಅಂದರೆ ಅವು ಲೈವ್ ಪ್ರಸಾರ ಅಲ್ಲ, ರೆಕಾರ್ಡೆಡ್ ಪ್ರಸಾರ!

**ಭೂಮಿಗೆ ಬಂದ ಅನ್ಯಗ್ರಹಜೀವಿಗಳು: ಒಂದು ಅಧ್ಯಯನ:**

ಈ ಸಂಚಿಕೆ ಜತೆ ಕೊಟ್ಟ ಇನ್ನೊಂದು ಕೊಂಡಿಯಲ್ಲಿ FREE PDF Book archives ನಿಂದ ಪಡೆದದ್ದು ಪುಸ್ತಕ ಡೌನ್ ಲೋಡ್ ನಿಮಗೆ ಕೊಟ್ಟಿದ್ದೇನೆ.

ಓದಿ ನೋಡಿ ರೋಸ್ವೆಲ್ ಘಟನೆಯ ಸಮಗ್ರ ವಿವರ ಅಲ್ಲಿದೆ.

ಇಲ್ಲಿಯೂ ಕೊಟ್ಟಿದ್ದೇನೆ: https://nageshwrites.files.wordpress.com/2018/10/the-day-after-roswell.pdf

## 11 ನೇ ಕಂತು:

# 1. ಅಮೇರಿಕಾದ ಭೂಗತ ಸುರಂಗ ಮಾರ್ಗ- ಅವಿತಿಟ್ಟುಕೊಳ್ಳಲು ಸುಲಭ!

ನಾನು ಈ ವಿಶೇಷಾಂಕ ಬರೆಯಲು ಎರಡು ಕಾರಣವಿದೆ, ಎರಡು ವಿಡಿಯೋ/ ಚಲನಚಿತ್ರದ ರೀತಿಯಲ್ಲಿ ಈ ಸಿದ್ಧಾಂತಕ್ಕೆ ಪುಷ್ಟಿ ಕೊಟ್ಟು ನನ್ನಲ್ಲಿ ಆಸಕ್ತಿ ಹುಟ್ಟಿಸಿತು...

ಮೊದಲನೆಯದಾಗಿ ಯೂ ಟ್ಯೂಬಿನಲ್ಲಿ ಸಿಕ್ಕ ಒಂದು ಮಾಹಿತಿ ಥಿಯರಿ ಪ್ರಕಾರ:

**ನಿಬಿರು ಕ್ಷುದ್ರಗ್ರಹ ಭೂಮಿಗೆ ಅಪ್ಪಳಿಸುವುದೆಂಬ ಭೀತಿಯಿಂದ ಅಮೇರಿಕನ್ ಸರಕಾರ ಮತ್ತು ವ್ಯಾಟಿಕನ್ ಚರ್ಚ್ ಪಾದ್ರಿಗಳು ಸೇರಿ ಅಮೇರಿಕದ ನೆಲಮಾಳಿಗೆ ರಹಸ್ಯ ಸುರಂಗ ತಾಣಗಳಲ್ಲಿ ಅಡಗಿಕೊಳ್ಳಲು ತಯಾರಾಗಿವೆಯಂತೆ!**




ಸ್ಟೀವ್ ಹಫ್ ಎಂಬ ನಿವೃತ್ತ ಸಿ ಐ ಎ ಅಧಿಕಾರಿ ಮತ್ತು ಕೋಟ್ಯಾಧೀಶ್ವರ ಕಾಂಕ್ರೀಟ್ ಕಾಂಟ್ರ್ಯಾಕ್ಟರ್ ಒಂದು ಅನುಪಮವಾದ ಭದ್ರ ಮಹಲು ಕಟ್ಟಿಸುತ್ತಿದ್ದಾನಂತೆ, ಇದರ ಪ್ರಗತಿ ಎಷ್ಟಾಗಿದೆ, ಏನಾಗಿದೆ ಎಲ್ಲವೂ ಗುಟ್ಟು!

ಇದರ ಕೆಳಗೆ ಕನೆಕ್ಷನ್ ಇದೆಯಂತೆ, ಬಹಳ ಆಳವಾದ ಭೂಗತ ಸುರಂಗ ಮಾರ್ಗ ಮತ್ತು ಅಡಗುತಾಣಗಳಿಗೆ ದ್ವಾರ.

ಅಮೆರಿಕಾದಲ್ಲಿ ಇಂತಾ 129 ರಹಸ್ಯ ನೆಲಮಾಳಿಗೆಗಳಿವೆ ಎಂದು ಊಹೆ. ಅಮೇರಿಕಾ ನಕ್ಷೆಯಲ್ಲಿ ಉದ್ದಗಲಕ್ಕೂ ಸುರಂಗಗಳಿವೆ ಎಂದೂ ಕೆಲವರು ಹೇಳುತ್ತಾರೆ...ಗೊತ್ತಿಲ್ಲ!

ಅಮೇರಿಕಾ ಸರಕಾರದ ರಹಸ್ಯ ಮಿಲಿಯ ಡಾಲರಿನ ಬ್ಲ್ಯಾಕ್ ಬಜೆಟ್ ಇದಕ್ಕೆ ಧನಸಹಾಯ ಮಾಡುತ್ತಿದೆಯೆ ಎಂದು ಈ ವಿಡಿಯೋದಲ್ಲಿ ಪ್ರಶ್ನಿಸಿದ್ದಾರೆ

https://www.youtube.com/watch?v=xcbIYw4CqPA

- ಈ ವಿಡಿಯೋ ನೋಡಿ, **( ಹೌದು, ಇಂಗ್ಲೀಷಿನಲ್ಲಿದೆ, ಕನ್ನಡದಲ್ಲೇಕಿಲ್ಲ ಎನ್ನಬೇಡಿ ಮತ್ತೆ*! ☺*)**
- ಯು ಎಸ್ ಎ ಯ ಮಿಸ್ಸೋರಿ ರಾಜ್ಯದಲ್ಲಿರುವ **ಈ ಪೆನ್ಸ್ಟೋರ್ ಭವನ** ಎಲ್ಲಾಬಗೆಯ ಆಧುನಿಕ ಮತ್ತು ಕೆಲವು ಪ್ರಾಯೋಗಿಕ ತಾಂತ್ರಿಕ ಸೌಲಭ್ಯಗಳನ್ನು ಹೊಂದಿದ ಏಕೈಕ ಭವನವಂತೆ.
- ಈ ವಿಶಿಷ್ಟ ದರ್ಜೆಯ ಕಾಂಕ್ರೀಟ್ ಭವನ- ಭೂಕಂಪ, ಬುಲೆಟ್, ಸ್ಫೋಟ ನಿಯಂತ್ರಕ, ಮತ್ತು ಕದ್ದಾಲಿಕೆ ಮಾಡಲಾಗದ ಹೊಸಬಗೆಯ ಕಟ್ಟಡ ತಂತ್ರಜ್ಞಾನವಂತೆ.
- ಅಲ್ಲದೇ ಒಂದು ಹಿರೋಷಿಮಾ ನಗರವನ್ನೇ ವಿನಾಶ ಮಾಡಿದ ಅಣು ಬಾಂಬ್/ ಹೈಡ್ರೋಜನ್ ಬಾಂಬಿಗಿಂತಲೂ ಹೆಚ್ಚಿನ ಶಕ್ತಿಯುಳ್ಳ ದರ್ಜೆಯ ದಾಳಿಯನ್ನು ಸಹಾ ತಡೆಯಬಲ್ಲುದಂತೆ; ಎಂತದೇ ಬಿರುಗಾಳಿ, ಚಂಡಮಾರುತವನ್ನೂ ಸಶಕ್ತವಾಗಿ ತಡೆಯಬಲ್ಲುದಂತೆ.
- ಈ ವಿಡಿಯೋ ಪ್ರಕಾರ ಆಗಲೇ conspiracy theory ಎಂಬ ಟಿ.ವಿ.ಯ ಜೆಸ್ಸಿ ವೆಂಚುರಾರವರ ಅಧ್ಯಯನದ ಪ್ರಕಾರ ಈ ಭವನದ ಕೆಳಗಿರುವುದು, ಜಗತ್ತಿಗೇ ಭಯಂಕರ ದುರಂತವಾದಾಗ ಅತಿ ದೊಡ್ಡ ಸುರಕ್ಷಾ ಕಾಲೋನಿಯಾಗುವಂತೆ ಅಮೆರಿಕನ್ನರಿಗೆ ರಹಸ್ಯವಾಗಿ ಕಟ್ಟಿಕೊಟ್ಟಿರುವ ಗುಪ್ತತಾಣ.
- ನಿಬಿರು ಅಥವಾ ಇನ್ನಾವುದೇ ಧೂಮಕೇತು ಅಥವಾ ದುಷ್ಟ ಅನ್ಯಗ್ರಹ ಜೀವಿಗಳಿಂದ ಅಣ್ವಸ್ತ್ರ ವಿನಾಶವೇ ಎದುರಾದರೂ, ಕೆಲವು "ಆಯ್ದ" ಅಮೆರಿಕನ್ನರು ಮಾತ್ರ ಆ ಪ್ರಳಯವನ್ನು ಗೆದ್ದು ಅಲ್ಲೇ ಜೀವನ ಮುಂದುವರೆಸಿ ಮತ್ತೆ ಇದೇ ಭೂಮಿಗೆ ಎಲ್ಲಾ ಸರಿಹೋದ ನಂತರ ಮರಳಬಹುದಂತೆ! ಇಂತವರಲ್ಲಿ ಸರಕಾರ ಆರಿಸಿದ ವಿಜ್ಞಾನಿಗಳು, ಮೇಧಾವಿಗಳು, ರಕ್ಷಣಾಧಿಕಾರಿಗಳು, ವೈದ್ಯರು, 50ಕ್ಕಿಂತಾ ಚಿಕ್ಕ ವಯಸ್ಸಿನ ಯುವ ಸಾಹಸಿ ಮತ್ತು ಸಾಧಕರು ಸೇರಿರುತ್ತಾರೆ, ಮತ್ತೊಮ್ಮೆ ಆರೋಗ್ಯಕರ ಯಶಸ್ವೀ ಸಮಾಜ ಕಟ್ಟಿ ಬಾಳಲು!
- *ಇದನ್ನು 1998 ರಲ್ಲಿ ಬಿಡುಗಡೆಯಾದ ಹಾಲಿವುಡ್ ಚಲನಚಿತ್ರ- ಡೀಪ್ ಇಂಪ್ಯಾಕ್ಟ್ ( Deep Impact*) ನಲ್ಲಿ ಯಾವುದೋ ಧೂಮಕೇತುವೊಂದು ಭೂಮಿಗೆ ಅಪ್ಪಳಿಸುವ ಕತೆಯಲ್ಲಿ ಮಿಸ್ಸೊರಿ ರಾಜ್ಯದ ಆರ್ಕ್ ಅಡಗುತಾಣದ ಬಗ್ಗೆ ಅಮೆರಿಕಾದ ಪ್ರೆಸಿಡೆಂಟ್ ಖುದ್ದಾಗಿ ತಮ್ಮ ಜನರಿಗೆ ಮಾಹಿತಿ ಕೊಟ್ಟು ಕಳಿಸುತ್ತಾರೆ, ಹಲವರು ಆ ರೀತಿ ರಕ್ಷಿಸಲ್ಪಡುತ್ತಾರೆ. ನೋಡಲು ಅತ್ಯಂತ ಅದ್ಭುತವಾದ ಚಿತ್ರ! (ನಿಬಿರು ಬಗ್ಗೆ ಅಲ್ಲ, ಅದೇ ತರಹ- ಧೂಮಕೇತು!)

- ಈ ಚಿತ್ರ ಅಂತರ್ಜಾಲದಲ್ಲಿ "ಕೆಲವು ಕಡೆ "ಡೌನ್ ಲೋಡ್" ಸಿಗುತ್ತದೆ, ನೀವೇ ಹುಡುಕಬೇಕು!!, ಸಿಕ್ಕರೆ ಮರೆಯದೇ ಪೂರ್ತಿ ಚಿತ್ರ ನೋಡಿ. ಅದರಲ್ಲಿನ ನಾಯಕಿಯ ಸಾಂಸಾರಿಕ ಜೀವನ, ವೈಯಕ್ತಿಕ ಭಾವಾನಾತ್ಮಕ ಕತೆ, ಟೀನೇಜ್ ರೋಮಾನ್ಸ್, ಗಗನಯಾತ್ರಿಗಳ ಕುಟುಂಬ ಜೀವನ, ಅವರ ತ್ಯಾಗ ಎಲ್ಲವೂ ಇದೆ, ಆದರೆ ಈ ಅವಗಢ ಮತ್ತು ಸುರಕ್ಷೆ ಚಿತ್ರದ ಬಹಳ ಮುಖ್ಯ ಭಾಗ!
- ಅದರ ಅಧಿಕೃತ ಮಾಹಿತಿ ಮಾತ್ರ ಇಲ್ಲಿ ವಿಕಿಪೀಡಿಯಾನಲ್ಲಿದೆ




https://en.wikipedia.org/wiki/Deep_Impact_(film)

- **ಇದು ಬೈಬೈಲ್ಲಿನ ನೋಅಹ್'ಸ್ ಆರ್ಕ್ ಗೆ ಅಮೆರಿಕಾದ ಈ ಯುಗದ ಉತ್ತರವಂತೆ, ಬಚಾವಾಗಲು!**

## 2. ಇರಾಕ್ ಯುದ್ಧ ಮಾಡಿದ್ದು ಅಲ್ಲಿನ ಮ್ಯೂಸಿಯಮ್ಮಿನಲ್ಲಿದ್ದ ಅನುನ್ನಾಕಿ ರಹಸ್ಯ ಕಡತ ಮಾಹಿತಿಗಾಗಿ?:

**ಇದಿನ್ನೊಂದು ಸ್ಫೋಟಕ ಮಾಹಿತಿ/ ಸಾಧ್ಯತೆ/( ಥಿಯರಿ ಅನ್ನಿ ಪರವಾಗಿಲ್ಲ), ಹೊರಹಾಕಿದೆ**

ಅಮೇರಿಕಾ ಇರಾಕ್ ಮೇಲೆ ಯುದ್ಧ ಮಾಡಿ ಗೆದ್ದ ನಂತರ ಮಾಡಿದ ಮೊದಲ ಕಾರ್ಯಾಚರಣೆ:- ಒಂದು ರಹಸ್ಯ ಆರ್ಮಿ ಮತ್ತು ಗುಪ್ತಚರರ ಟೀಮ್ ದಾಳಿಯಿಟ್ಟಿದ್ದು ಬಾಗ್ದಾದಿನ ಮ್ಯೂಸಿಯಮನ್ನು ಲೂಟಿ ಮಾಡಲು.

***ಅದುವೇ ನಮಗೆ ಈಗ ತಿಳಿದಂತೆ: ಹಳೇ ಸುಮೇರಿಯನ್ನರ ಮಾಹಿತಿಯಿದ್ದ ಮೆಸೊಪೊಟೇಮಿಯಾ ನಾಗರೀಕತೆ ಅಲ್ಲವೆ?***




ಅಂದರೆ ಅಮೆರಿಕಾ ಈ ಸುಮೆರಿಯನ್ ನಾಗರೀಕತೆ, ನಿಬಿರು ಗ್ರಹದ ಅನುನ್ನಾಕಿ ಬಗ್ಗೆ ಎಲ್ಲಾ ಮಾಹಿತಿ ಇಟ್ಟುಕೊಂಡಿದೆ; ಅದನ್ನು ನಂಬಲಿಕ್ಕೆ ತಯಾರಿದೆ. ಅಲ್ಲಿಗೆ ನುಗ್ಗಿದ ಅಮೇರಿಕನ್ ತಂಡಕ್ಕೆ ಎಲ್ಲೆಲ್ಲಿ ಏನೇನು ಸುಮೆರಿಯನ್ನರ ಮಾಹಿತಿ ಚಿತ್ರ, ಬರಹ, ಶಿಲ್ಪ ಇದೆ ಎಂಬ ಸ್ಪಷ್ಟ ಕಲ್ಪನೆಯಿತ್ತಂತೆ. ಸರ್ವ ಸಜ್ಜಿತರಾಗಿ ಗೆದ್ದ ಸೈನಿಕರಂತೆ ನುಗ್ಗಿದವರು ಎಲ್ಲರ ಕಣ್ತಪ್ಪಿಸಿ ಅಲ್ಲಿದ್ದ ನಕಲಿ ವಿಗ್ರಹ, ಕಡತ, ಮಾಹಿತಿಯನ್ನು ಗುರುತಿಸಿ ಅವನ್ನು ಅಲ್ಲೇ ಬಿಟ್ಟು, ನೆಲಮಾಳಿಗೆಯಲ್ಲಿ ಇರಾಕಿಗಳು ಬಚ್ಚಿಟ್ಟಿದ್ದ ಈ ಅಮೂಲ್ಯ ರಹಸ್ಯ ( ಸಂಪತ್ತು ಎನ್ನಬಹುದೆ?) ವನ್ನು ಅಮೇರಿಕನ್ ಸೈನಿಕರು ಕದ್ದೊಯ್ದಿದ್ದಾರಂತೆ. ಅದೀಗ ನಿಶ್ಚಿತವಾಗಿ ಸರಕಾರದಲ್ಲಿ ತನಿಖೆ ಮತ್ತು ಅಧ್ಯಯನಕ್ಕೆ ಒಳಗಾಗಿರಬೇಕು. ಅದರಲ್ಲೇನಿತ್ತು, ಅಂತಾ ರಹಸ್ಯ ಎಂದರೆ:-

ಈ ಚಿತ್ರ ನೋಡಿ ಓದಿಕೊಳ್ಳಿ:




ಅಂದರೆ- ಅಮೆರಿಕಾಗೆ ಇನ್ನು ತಿಳಿಯದ- ಸುಮೇರಿಯನ್ನರು/ ಅನುನ್ನಾಕಿಯವರ ಸಂತತಿಯವರು- ಎನರ್ಜಿ(ಶಕ್ತಿ) ಯನ್ನು ಹೇಗೆ ತಮ್ಮ ಕೈ ಚಳಕದಿಂದ ಪವಾಡ ಸದೃಶವಾಗಿ ಬದಲಿಸಿ ಸೃಷ್ಟಿಯಲ್ಲಿ ಗೆಲ್ಲಬಹುದು- ಎಂಬ ಯಾರೂ ಅರಿಯದ ರಹಸ್ಯ ಅದರಲ್ಲಿತಂತೆ. ಅಂದರೆ ಇದೀಗ ಅಮೇರಿಕಾ ಪಾಲಾಗಿದೆ. ಇದು ಸಹಾ ಮೇಲೆ ಕೊಟ್ಟ ಅದೇ ಯೂಟ್ಯೂಬ್ ವಿಡಿಯೋದಲ್ಲಿದೆ

ಇದೆಲ್ಲಾ ಸತ್ಯವೆ? ಸುಳ್ಳೆ? ತಪ್ಪೆ, ಸರಿಯೆ?-ಯಾರಿಗೆ ಗೊತ್ತು?...**ಮಾಹಿತಿಯನ್ನು ನಿಮ್ಮ ಮುಂದಿಟ್ಟಿದ್ದೇನೆ, ನಿಮ್ಮ ನಂಬಿಕೆ ನಿಮಗೆ!**

ಅವರೇನು ಮಾಡುವರು? ಮಾಡುವರೆ? ಯಾರಿಗಾಗಿ? ಎಲ್ಲರಿಗಾಗಿಯೇ? ಎಂದು? ಹೇಗೆ - ಇದು ಸಹಾ ಯಾರಿಗೂ ತಿಳಿಯದ ರಹಸ್ಯ!

ಸರಿ, ಇಷ್ಟು ಹೇಳಿ 10 ನೇ ಅಧ್ಯಾಯಕ್ಕೆ ಕೆಲವೇ ದಿನಗಳಲ್ಲಿ ಮುಂದುವರೆಯುತ್ತೇನೆ. ನಿರೀಕ್ಷಿಸಿ!

| |
|---|
| 10ನೇ ಅಧ್ಯಾಯ ಬರೆಯುವ ಮೊದಲು ಕೆಲವರು 9ನೇ ಕಂತಿನಲ್ಲಿದ್ದ ನಿಬಿರು ಗ್ರಹದ ಬಗ್ಗೆ ಇನ್ನೂ ಸ್ವಲ್ಪ ಹೇಳಿ ಎಂದಿರಿ... |
| ನಿಜಕ್ಕೂ ನನಗೆ ಇದಕ್ಕಿಂತಾ ಹೆಚ್ಚಿನ ಮಾಹಿತಿ ಇಲ್ಲ, ಬೇಕಾಗಿಯೂ ಇಲ್ಲ ಎನಿಸುತ್ತಿದೆ. ಎಲ್ಲರೂ ಆರ್ಕೈವ್.org ವೆಬ್ ತಾಣದಲ್ಲಿ ದೊರೆಯುವ Sitchin ರ ಈ ಉಚಿತ PDF ಪುಸ್ತಕ '12ಥ್ ಪ್ಲಾನೆಟ್' ಓದಿ: |
| https://archive.org/details/B-001-000-340/page/n3 |
| Sitchin ಬರೆದ ಒಟ್ಟು 12 ಪುಸ್ತಕಗಳ ಸಾಫ್ಟ್ ಕಾಪಿ ಇಲ್ಲಿದೆ, ಅವರ ಸಿದ್ಧಾಂತ ಜಗತ್ತಿನಲ್ಲಿ ಜನಪ್ರಿಯವಾಗಿವೆ, ಬಹಳ ಆಳವಾದ ಮಾಹಿತಿ ಇದೆ.<br>https://archive.org/details/ThereWereGiantsUponTheEarthZechariaSitchin/page/n7 |
| ಇನ್ನು ಮಿಕ್ಕಿದ್ದೆಲ್ಲಾ "ಅಂತೆ ಕಂತೆ"ಗಳ ದೊಡ್ಡ ಸಂತೆ! |

ಇಂದು (16.10.2018) ಸಹಾ NEWS-18 Kannada TV ನಲ್ಲಿ "ಏಲಿಯನ್ ಗಳಿಂದ ಜಗತ್ತಿನ ವಿನಾಶ ಆಗುತ್ತೆಯೆ?" ಎಂದು "ಭಯಂಕರ, ಭೀಕರ, ಸರ್ವನಾಶ" ಇತ್ಯಾದಿ ಪದಗಳನ್ನು ಧಾರಾಳವಾಗಿ ಉಪಯೋಗಿಸಿ ಅರ್ಧಗಂಟೆ ಕಾಲ ಕೊರೆದರು, ಒಂದು ಪೈಸಾ ಮಾಹಿತಿಯನ್ನೂ ಕೊಡದೇ...ಬರೇ ಹಾಲಿವುಡ್ಡಿನ ಏಲಿಯನ್ಸ್ ಬಗ್ಗೆಯ ಚಲನಚಿತ್ರಗಳ ತುಣುಕನ್ನು ತೋರಿಸುತ್ತಾ!!. ಹೀಗಿದೆ ನೋಡಿ ದಾಖಲೆಗಳ ಕೊರತೆ...ಅದಕ್ಕೇ ನಾನು ತಿಳಿದಷ್ಟನ್ನೂ ಮಾತ್ರ ನಿಮ್ಮ ಮುಂದಿಟ್ಟಿದ್ದೇನೆ. ಮಿಕ್ಕ ಓದು, ಹುಡುಕಾಟ ನಿಮ್ಮದು.